ಡಾ. ಜಿ. ಕೃಷ್ಣಪ್ಪ

# ಬೇಂದ್ರೆಯವರ ಸಾಹಿತ್ಯದಲ್ಲಿ ಶರಣ ಚಿಂತನೆ



# ಬೇಂದ್ರೆಯವರ ಸಾಹಿತ್ಯದಲ್ಲಿ ಶರಣ ಚಿಂತನೆ

ಡಾ. ಜಿ. ಕೃಷ್ಣಪ್ಪ



ವಂಶಿ ಪಬ್ಲಿಕೇಷನ್ಸ್
ನೆಲಮಂಗಲ, ಬೆಂಗಳೂರು

**BENDREYAVARA SAHITHYADALLI SHARANA CHINTHANE** - by Dr. G. Krishnappa, # 22, Sri Gurudatta Nilaya, 1st Cross, Nethaji Nagar, Mattikere, Bengaluru 560 054, Mob : 99721 09209.

Published by
Vamshi Publication
# 72/2, 9th Cross
Vajarahalli Main Road, Subhashnagar
Nelamangala, Bengaluru 562 123
Mob: 97430 55511, 9900416881

First Edition : 2015

Pages : 36

Copies : 1000

Price : 30/-

Size : Demy 1/8

Paper Used : 70 GSM NS Maplitho

© : Author

Cover Page: G. Arun Kumar

ಸ್ವಾನ್ ಪ್ರಿಂಟರ್ಸ್
svanprint@gmail.com
☎ 080-26742233

# ಮುನ್ನುಡಿ

ಡಾ. ಜಿ. ಕೃಷ್ಣಪ್ಪನವರು ಬರೆದ ವರಕವಿ ಬೇಂದ್ರೆಯವರ ಸಾಹಿತ್ಯದಲ್ಲಿ ಶರಣ ಚಿಂತನೆ ಎಂಬ 36 ಪುಟಗಳ ಈ ಚಿಕ್ಕ ಪುಸ್ತಿಕೆಗೆ ಮುನ್ನುಡಿ ಬರೆಯಬೇಕೆಂದು ನನ್ನನ್ನು ಕೇಳಿದಾಗ ಆಗಲಿ ಎಂದಾಗಲೀ, ಇಲ್ಲ ಎಂದಾಗಲೀ ಕೂಡಲೇ ಹೇಳುವುದು ನನ್ನಿಂದಾಗಲಿಲ್ಲ. ಏಕೆಂದರೆ ಡಾ. ಜಿ. ಕೃಷ್ಣಪ್ಪನವರು ಬೇಂದ್ರೆ ಸಾಹಿತ್ಯವನ್ನು ಆದ್ಯಾಂತವಾಗಿ ಇಡೀ ತಮ್ಮ ಜೀವಮಾನದಲ್ಲಿ ಅಭ್ಯಾಸ ಮಾಡಿದ್ದಾರೆ. ಬೇಂದ್ರೆಯವರ ನುಡಿಗಟ್ಟನ್ನು, ಜನಪದ ಭಾಷೆಯನ್ನು, ಅವರ ಆಧ್ಯಾತ್ಮಿಕ ಮನೋಭಾವ ದರ್ಶನವನ್ನು ಮಾಡಿಕೊಂಡವರು ಡಾ. ಜಿ. ಕೃಷ್ಣಪ್ಪನವರು. ಅವರ ಈ ಪುಸ್ತಕಕ್ಕೆ ಮುನ್ನುಡಿ ಬರೆಯಬೇಕಾದರೆ, ಬೇಂದ್ರೆ ಸಾಹಿತ್ಯವನ್ನು ಅದರಲ್ಲೂ ಅವರ ದಾರ್ಶನಿಕ ದೃಷ್ಟಿ (Mysticsm) ಅನುಭಾವದ ಕಿಂಚಿತ್ ಸ್ಪರ್ಶವಾದರೂ ಆಗಿರಬೇಕು. ಡಾ. ಬೇಂದ್ರೆಯವರು ನನ್ನ ಸಾಹಿತ್ಯಿಕ ಜೀವನದಲ್ಲಿ ಗುರು ಸ್ಥಾನವನ್ನು ಪಡೆದಿದ್ದಾರೆ. ಕುವೆಂಪು ಅವರು ನನ್ನನ್ನು ಶ್ರೀ ರಾಮಕೃಷ್ಣ ವಿವೇಕಾನಂದರ ಪದತಲದಲ್ಲಿ ಶರಣಾಗುವುದಕ್ಕೆ ಗುರುಗಳಾದಂತೆ, ಬೇಂದ್ರೆ ಮಾಸ್ತರರು ಶ್ರೀ ಅರವಿಂದ ಮತ್ತು ಶ್ರೀ ಮಾತಾಜಿಯವರ ಪದತಲಕ್ಕೆ ಕೆಡಹಿದ ಗುರುಗಳು. ಈ ದೃಷ್ಟಿಯಿಂದ ಡಾ. ಕೃಷ್ಣಪ್ಪನವರ ಅಪೇಕ್ಷೆಯನ್ನು ನಾನು ತಿರಸ್ಕರಿಸುವಂತಿರಲಿಲ್ಲ. ಆದರೂ ಮುನ್ನುಡಿ ಬರೆಯುವೆನೆಂದು ಕೂಡಲೇ ಹೇಳಲಿಲ್ಲ.

ಡಾ. ಕೃಷ್ಣಪ್ಪನವರು ಈ ಹೊತ್ತಿಗೆಯ ಡಿ.ಟಿ.ಪಿ ಪ್ರತಿಗಳನ್ನು ಕೊಟ್ಟರು. 36 ಪುಟಗಳಲ್ಲಿರುವ ಈ ಪುಸ್ತಿಕೆ 36 ಪುಸ್ತಕಗಳಲ್ಲಿ ಬರೆಯಬಹುದಾದ ಶರಣ ಸಂಸ್ಕೃತಿ, ಶರಣ ದರ್ಶನದ ಸಾರವನ್ನು ಬಿಂದುವಿನಲ್ಲಿ ಸಿಂಧುವನ್ನು ತೋರಿಸಿದಂತೆ, ಬೆಡಗಿನ ವಚನಗಳಂತೆ ನಿರೂಪಿಸಿದ್ದಾರೆ. ಶರಣ ದರ್ಶನ, ಶರಣ ಸಂಸ್ಕೃತಿ, ಶರಣ ಆಧ್ಯಾತ್ಮಿಕ ಔನ್ನತ್ಯ ಜೀವ – ಜಗತ್ತು – ಈಶ್ವರ, ಅಂಗ, ಲಿಂಗ, ಜಂಗಮ – ಇವುಗಳ ಪರಸ್ಪರ ಸಂಬಂಧವನ್ನು ಕಾಯಕದ ಸಹಾಯದಿಂದ ಶಿವಜೀವರ ಐಕ್ಯ ಸ್ಥಳವನ್ನು ನಿರೂಪಿಸಿದ್ದಾರೆ. ಈ ನಿರೂಪಣೆಯನ್ನು ಇಷ್ಟೊಂದು ಸಂಕ್ಷಿಪ್ತವಾಗಿ ಹೇಳಿರುವುದು ಗ್ರಂಥಕರ್ತರ ಅಗಾಧವಾದ ಅಭ್ಯಾಸದ ಫಲ.

ವೀರಶೈವದ ಈ ಸಾರವನ್ನು ಬೇಂದ್ರೆ ಮಾಸ್ತರರು ತಮ್ಮ ವಿಶಿಷ್ಟವಾದ ದೇಶಿ ಆಡುಮಾತಿನಲ್ಲಿ ವ್ಯಕ್ತಪಡಿಸಿರುವುದನ್ನು ಡಾ. ಕೃಷ್ಣಪ್ಪನವರು ಸಮುಚಿತ ರೀತಿಯಲ್ಲಿ ಇಲ್ಲಿ ದಾಖಲಿಸಿದ್ದಾರೆ. ನಮ್ಮಂಥವರು ಇನ್ನೂ ಸಾಹಿತ್ಯ ಕ್ಷೇತ್ರದಲ್ಲೇ ಬಾಲ್ಯವಸ್ಥೆಯಲ್ಲಿದ್ದಾಗ ಬೇಂದ್ರೆ ಮಾಸ್ತರರ ಕಡೆಗೆ ಆಕರ್ಷಿತರಾದದ್ದು ಅವರ 'ಗರಿ'ಯಂಥ ಹಗುರವಾದ ಕವನ ಸಂಕಲನದ 'ಗರಿ'ಯಿಂದ. ಅವರ 'ತುತ್ತಿನ ಚೀಲ' 'ಮಕ್ಕಳಿವರೇ ನಮ್ಮ ಮೂವತ್ತು ಮೂರು ಕೋಟಿ?' 'ಗಂಡುಸಾದರೆ ನಿನ್ನ ಬಲಿಕೊಡುವೆಯೇನು?' ಎಂಬಂಥ ದೇಶಪ್ರೇಮವನ್ನು ಉದ್ದೀಪನಗೊಳಿಸುವ ಕವಿತೆಗಳಿಂದ, ಜೊತೆಗೆ ಬೇಂದ್ರೆಯವರು ಬ್ರಿಟಿಷ್ ಆಡಳಿತೆಯ ವಿರುದ್ಧ ಕವಿತೆ ರಚನೆ ಮಾಡಿ ತುರಂಗ ವಾಸ ಅನುಭವಿಸಿದ್ದ ಅವರ ತ್ಯಾಗ ನಮ್ಮನ್ನೆಲ್ಲ ಆಕರ್ಷಿಸಿತ್ತು. ತರುವಾಯ ಅವರು ಬರೆದ ನಾದಲೋಲ ಲಕ್ಷ್ಮೀಶ, ಕಾಳಿದಾಸನ ಮೇಘದೂತ ಅನುವಾದ ಮುಂತಾದ ಪಾಂಡಿತ್ಯಪೂರ್ಣವಾದ ಗ್ರಂಥಗಳು ನಮ್ಮನ್ನು ಆಕರ್ಷಿಸಿದವು. ಆದರೆ ಅವರ ಪ್ರಬುದ್ಧಾವಸ್ಥೆಯಲ್ಲಿ ಬರೆದ 'ನಾಕುತಂತಿ'... ಮುಂತಾದ ಗ್ರಂಥಗಳು ಸ್ಪಷ್ಟವಾಗಿ ಅರ್ಥವಾಗುತ್ತಿರಲಿಲ್ಲ. ಒಮ್ಮೊಮ್ಮೆ ನಾನು ಬೇಂದ್ರೆ ಮಾಸ್ತರೊಡನೆ ಮಾತನಾಡುತ್ತಿದ್ದಾಗ, ಬಹುಸಲುಗೆಯಿಂದ ಮೊಮ್ಮಕ್ಕಳು ಅಜ್ಜನೊಡನೆ ಮಾತನಾಡುವಂತೆ "ಸಾರ್, ನಿಮ್ಮ ನಾಕುತಂತಿ ನನಗೆ ಅರ್ಥವಾಗಲಿಲ್ಲ; ಇಂಥಾದ್ದನ್ನು ಏಕೆ ಬರೆದೀರಿ?" ಎಂದೆ. ಅವರಿಗೆ ಸಹಜವಾದ, ವಾತ್ಸಲ್ಯದಿಂದ ಸರಳವಾದ ಮಾತಿನಲ್ಲಿ "ಓದೋ... ಓದು.... ಓದು ಮನಸ್ಸಿಟ್ಟು ಓದು... ಅರ್ಥ ಆಗತೈತೆ, ನಿನಗೆ ಅರ್ಥ ಆಗಲಿಲ್ಲ ಅಂಥ ಹೇಳ್ತೀಯಲ್ಲ... ಮುಂದೆ ನಿನಗೆ ಅರ್ಥ ಆಗತೈತೆ ಅಂಥ ಅದರರ್ಥ" ಎಂದರು. ಅತೃಪ್ತಿ ಪ್ರಗತಿಯ ಮುನ್ಸೂಚನೆ. ತೃಪ್ತಿಯಾಗಿದ್ದಾಗ ತೃಪ್ತಿ ಪಡೆಯ ಬೇಕೆಂಬ ತುಡಿತ ಉಂಟಾಗುತ್ತದೆ. ಒಮ್ಮೆ ತೃಪ್ತಿ ಉಂಟಾದ ಮೇಲೆ ಪ್ರಗತಿಗೆ ಪ್ರಚೋದನೆಯೇ ಇಲ್ಲದಂತಾಗುತ್ತದೆ. ಇದು ಶ್ರೀ ಅರವಿಂದರು ಒಂದು ಸಂದರ್ಭದಲ್ಲಿ ಹೇಳಿದ ಮಾತು. ಬೇಂದ್ರೆ ಮಾಸ್ತರರು ನನಗೆ ಹೇಳಿದ ಮಾತುಗಳು ಶ್ರೀ ಅರವಿಂದರ ಅಭಿಪ್ರಾಯವನ್ನು ಒಳಗೊಂಡಿವೆ. ಅವರ ಆಜ್ಞಾರೂಪದ ಸೂಚನೆಯಂತೆ ಅವರ ಅರ್ಥವಾಗದ ಕೆಲವು ಪದ್ಯಗಳನ್ನು ಮತ್ತೆ ಮತ್ತೆ ಓದಿ ಮನನ ಮಾಡಿಕೊಳ್ಳಲು ಪ್ರಯತ್ನಿಸಿದೆ. ಡಾ. ಕೃಷ್ಣಪ್ಪನವರು ಬೇಂದ್ರೆ ಮಾಸ್ತರರಿಗೆ ಜ್ಞಾನಪೀಠ ಪ್ರಶಸ್ತಿಗೆ ಕಾರಣವಾದ ನಾಕುತಂತಿ ಗ್ರಂಥವನ್ನು ಕುರಿತು ಪುಸ್ತಿಕೆಯೊಂದನ್ನು ರಚಿಸಿದ್ದಾರೆ. ಅದನ್ನು ಓದಿದ ಮೇಲೆ ನಾಕುತಂತಿಯ ಅಂತರಾರ್ಥ ದೂರದಿಂದ ಕಾಣುವ ದೀಪದಂತೆ ದರ್ಶನವಾಯಿತು. ಹೀಗೆ ಬೇಂದ್ರೆ ಮಾಸ್ತರರ ಸರ್ವಸಾಧಾರಣ ಎಂದು ಕಾಣುವ ಕವಿತೆಗಳಲ್ಲಿ ಶರಣ ಸಾಹಿತ್ಯದ ಸಾರ ಹೇಗೆ ಮೂಡಿದೆ ಎಂದು ಡಾ. ಕೃಷ್ಣಪ್ಪನವರು ಈ ಪುಸ್ತಿಕೆಯಲ್ಲಿ ಕಾಣಿಸಿದ್ದಾರೆ. ಇದು ಸಾಹಸದ ಕೆಲಸ.

ಅವರ ಈ ಸಾಹಸವನ್ನು ನಾನು ಮೆಚ್ಚಿ "ಕೃಷ್ಣಪ್ಪನವರೇ ಈ ಪುಸ್ತಕದ ವಿಷಯವನ್ನು ಇನ್ನೂ ವಿಸ್ತಾರವಾಗಿ ಬರೆದಿದ್ದರೆ, ಓದುಗರಿಗೆ ಅನುಕೂಲವಾಗುತ್ತಿತ್ತು. ಶರಣ ಚಿಂತನೆ ಇನ್ನೂ ಸುಲಭವಾಗಿ ಅರ್ಥವಾಗುತ್ತಿತ್ತು" ಎಂದೆ. ಆಗ ಅವರು "ಬರೆಯ ಬಹುದಾಗಿತ್ತು, ಆದರೆ ಜಾಳ ಜಾಳವಾಗುತ್ತಿತ್ತು. ಅದಕ್ಕಾಗಿಯೇ ಸಂಕ್ಷಿಪ್ತವಾಗಿ ಬರೆದೆ" ಎಂದರು. ಈ ಮಾತು ನಿಜವೆ. ಡಾ. ಕೃಷ್ಣಪ್ಪನವರ ಈ ಗ್ರಂಥವನ್ನು ಓದಲಿಚ್ಛಿಸುವ ಸಹೃದಯ ಒಮ್ಮೊಮ್ಮೆ ಗ್ರಂಥಕರ್ತೃವಿಗಿಂತಲೂ ವಿಸ್ತಾರವಾದ ಜ್ಞಾನದ ಪರಿಚಯವುಳ್ಳವನಾಗಿರಬೇಕಾಗುತ್ತದೆ. ಅಂಥ ಜಿಜ್ಞಾಸುಗಳು ಈ ಪುಟ್ಟ ಪುಸ್ತಿಕೆಯಿಂದ ಪ್ರಯೋಜನ ಪಡೆದಾರು. ಅಂತೂ ಈ ಪುಸ್ತಿಕೆಯನ್ನು ಶರಣ ಸಂಸ್ಕೃತಿ, ಶರಣ ಚಿಂತನೆಯಲ್ಲಿ ಆಸಕ್ತಿಯುಳ್ಳವರು ಅಭ್ಯಸಿಸಲು ಯೋಗ್ಯವಾದ ಆಕರ ಗ್ರಂಥವೆಂದು ನಾನು ಭಾವಿಸುತ್ತೇನೆ. ಶರಣ ಸಂಸ್ಕೃತಿ, ಶರಣ ಚಿಂತನೆ, ಶರಣ ತತ್ತ್ವಕ್ಕೆ ಇದೊಂದು ಅಮೂಲ್ಯ ಕೊಡುಗೆ.

ಇದಕ್ಕಿಂತ ದೀರ್ಘವಾದ ಮುನ್ನುಡಿ ಬರೆಯುವುದು 'ಮೂಗಿಗಿಂತ ಮೂಗುತಿಯೇ ದೊಡ್ಡದೆಂಬ' ಹಾಸ್ಯಕ್ಕೊಳಗಾಗಬಹುದು. ಇಷ್ಟು ಸಾಕು. ಡಾ. ಕೃಷ್ಣಪ್ಪನವರು ಧನ್ಯರು.

ಬೆಂಗಳೂರು | ಕೋ. ಚೆನ್ನಬಸಪ್ಪ

# ಲೇಖಕನ ನುಡಿ

ಧಾರವಾಡದಲ್ಲಿ ಹುಟ್ಟಿ ಬೆಳೆದ ವರಕವಿ ದ.ರಾ.ಬೇಂದ್ರೆಯವರು ಶರಣತತ್ವವನ್ನು ತಮ್ಮ ಉಸಿರಾಗಿಸಿಕೊಂಡಿದ್ದರು. ಅದರ ಸೂಕ್ಷ್ಮಾತಿಸೂಕ್ಷ್ಮ ಚಿಂತನೆಯನ್ನು ತಮ್ಮ ಕಾವ್ಯದಲ್ಲಿ ಅನನ್ಯವಾಗಿ ಕಟ್ಟಿಕೊಟ್ಟರು. ಅದನ್ನು ಹಲವಾರು ವರ್ಷಗಳಿಂದ ಅಭ್ಯಾಸ ಮಾಡಿದ ನಾನು 'ಬೇಂದ್ರೆಯವರ ಸಾಹಿತ್ಯದಲ್ಲಿ ಶರಣ ಚಿಂತನೆ' ಲೇಖನವನ್ನು ಬರೆದೆನು. ಅದನ್ನು 'ಬಸವಪಥ' ಮಾಸಿಕದಲ್ಲಿ ಪೂಜ್ಯ ಶ್ರೀ ಶಿವಾನುಭವ ಚರಮೂರ್ತಿ ಶಿವರುದ್ರ ಮಹಾಸ್ವಾಮಿಗಳು ಮತ್ತು ಪ್ರೊ॥ ಸಿ. ಎಂ. ಕುಂದಗೋಳ್ ಮತ್ತು ಶ್ರೀ ಅರವಿಂದ ಜತ್ತಿ ಅವರು 2015ರ ಜನವರಿಯಿಂದ ಏಪ್ರಿಲ್‌ವರೆಗೆ ಕಂತುಗಳಲ್ಲಿ ನಾಲ್ಕುತಿಂಗಳು ಪ್ರಕಟಿಸಿದರು. ಸಹೃದಯ ಕನ್ನಡಿಗರು ಓದಲು ಅವಕಾಶ ಒದಗಿಸಿದರು. ಅದಕ್ಕಾಗಿ ಅವರಿಗೆ ಧನ್ಯವಾದಗಳು.

ಅದು ಈಗ ಒಂದು ಪುಟ್ಟ ಕೃತಿಯಾಗಿ ಪ್ರಕಟವಾಗುತ್ತಿದೆ. ಅದಕ್ಕೆ ಮಹಾ ಯೋಗಿ ಶ್ರೀ ಅರವಿಂದರ ಚಿಂತನೆ, ಕವಿ ಕುವೆಂಪು ಅವರ ಕಾವ್ಯವನ್ನು ಸಮಗ್ರವಾಗಿ ತಿಳಿದು ನಾಡಿನ ಜನತೆಗೆ ಅದರ ಸವಿ ಉಣಿಸುತ್ತಿರುವ ಹಿರಿಯ ಸಾಹಿತಿಗಳಾದ ಶ್ರೀ ಕೋ. ಚೆನ್ನಬಸಪ್ಪನವರು ಆಶೀರ್ವಾದ ಮುನ್ನುಡಿ ಬರೆದಿರುವುದು ನನ್ನ ಭಾಗ್ಯ.

ಪರ್ತಕರ್ತ ಶ್ರೀ ಬಿ.ಎಸ್. ಜಯಪ್ರಕಾಶ್ ಅವರು ಇದು ಪ್ರಕಟವಾಗಲೆಂದು ಆಶಿಸಿದರು. ವಂಶಿ ಪ್ರಕಾಶನದ ಯುವ ಉತ್ಸಾಹಿ ಶ್ರೀ ಎನ್. ಪ್ರಕಾಶ್ ಅವರು ಪ್ರಕಾಶಿಸುತ್ತಿರುವರು. ಅವರಿಬ್ಬರಿಗೂ ನನ್ನ ನಮನಗಳು. ಇದನ್ನು ಡಿ.ಟಿ.ಪಿ ಮಾಡಿಸಿ ಮುದ್ರಿಸಿದ ಸ್ವ್ಯಾನ್ ಪ್ರಿಂಟರ್ಸ್‌ನ ಮಾಲೀಕರಾದ ಶ್ರೀ ಕೃಷ್ಣಮೂರ್ತಿ ಅವರಿಗೆ ವಂದನೆಗಳು ಇದನ್ನು ನಾಡಿನ ಸಹೃದಯ ಸಾಹಿತ್ಯಾಸಕ್ತರು ಓದಿ ನನ್ನನ್ನು ಪ್ರೋತ್ಸಾಹಿಸಬೇಕೆಂದು ಪ್ರಾರ್ಥನೆ.

**ಬೆಂಗಳೂರು** **ಡಾ.ಜಿ. ಕೃಷ್ಣಪ್ಪ**

13.9.2015

# ಬೇಂದ್ರೆಯವರ ಸಾಹಿತ್ಯದಲ್ಲಿ ಶರಣ ಚಿಂತನೆ

ಡಾ. ದತ್ತಾತ್ರೇಯ ರಾಮಚಂದ್ರ ಬೇಂದ್ರೆಯವರು ಶರಣರ ಬೀಡಾದ ಧಾರವಾಡದಲ್ಲಿ ಹುಟ್ಟಿದರು. ಬಡ ಬ್ರಾಹ್ಮಣ ಕುಟುಂಬದ ಅವರಿಗೆ ಇಡೀ ಧಾರವಾಡವೆ ಆಡುಂಬೊಲವಾಗಿತ್ತು. ಎಲ್ಲ ಬಡಮಕ್ಕಳಂತೆ ಸಮುದಾಯದ ಸಕಲರ ಪ್ರೀತಿಯ ಕೂಸಾಗಿ ಬೆಳೆದ ಅವರಿಗೆ  ಜಾತಿ ಮತ ಪಂಥ, ಮಡಿಮೈಲಿಗೆ, ಸಿರಿತನ ಬಡತನದ ಸೋಂಕು ಅಂಟಲಿಲ್ಲ, ವೇದದ ಪಾಠ, ಜಂಗಮರ ನುಡಿ, ಕರಡಿಕುಣಿತ, ಬಯಲಾಟ ಎಲ್ಲವೂ ಅವರ ಜೀವ ಪೋಷಕ ದ್ರವ್ಯವಾಗಿ ಅವರ ವ್ಯಕ್ತಿತ್ವವನ್ನು ರೂಪಿಸಿದವು.

ಬೇಂದ್ರೆಯವರು ಪ್ರಾಚೀನವಾದ ಅಕ್ಷರ ವೃತ್ತ, ಮಾತ್ರ ವೃತ್ತಗಳ ನಿಯಮ ಬದ್ಧತೆಯನ್ನು, ಸಹಜ ಯತಿಯನ್ನು; ಅಂಶ ವೃತ್ತಗಳ ಮನೋಹರ ಲಯವನ್ನು; ಜನಪದ ಕಾವ್ಯಗಳ ಬೆಡಗು ಬಿನ್ನಾಣಗಳನ್ನು; ಲಾವಣಿ ಹಾಡುಗಳ ಗೇಯತೆಯನ್ನು ಹೊಸಗನ್ನಡ ಛಂದಸ್ಸಿಗೆ ಜೋಡಿಸಿದರು. ವಚನಕಾರರ ಮಾತಿನ ಲಯಗಳಿಂದ ದಾಸರ ಕೀರ್ತನೆಗಳ ನಾದಲಯಗಳಿಂದ ಹೊಸ ಛಂದಸ್ಸನ್ನು ಹದಗೊಳಿಸಿದರು.

ಬೇಂದ್ರೆಯವರು ಆಂಗ್ಲಭಾಷಾ ಸಾಹಿತ್ಯವನ್ನು ಆಳವಾಗಿ ಅಭ್ಯಾಸ ಮಾಡಿದ್ದರಾದರೂ ಪಾಶ್ಚಾತ್ಯ ಪ್ರೇರಣೆಗೆ ಒಳಗಾಗದೆ ದೇಸಿ ಪ್ರಜ್ಞೆಯಲ್ಲಿ ಅರಳಿದ ಕಾವ್ಯ ನೀಡಿದರು. ಅವರು ಮೆಚ್ಚಿದ್ದು ಸರ್ವಜ್ಞ, ಹರಿಹರ, ಲಕ್ಷ್ಮೀಶ, ವಚನಕಾರರು ಹಾಗೂ ಹರಿದಾಸರನ್ನು.

'ಬೆಳಗು' ಕವನ ಪ್ರಕಟವಾದಾಗ ಅವರು ತಮ್ಮ ಕಾವ್ಯನಾಮವನ್ನು 'ಸದಾನಂದ ಜಂಗಮ' ಎಂದಿಟ್ಟುಕೊಂಡಿದ್ದರು. ನವೋದಯ ಕಾವ್ಯದ ಪ್ರಮುಖ ಕವಿಗಳಾದ ಅವರು ಲೌಕಿಕ ಭಾವನೆಗಳ ಅಭಿವ್ಯಕ್ತಿಗೆ ವಚನ ಶೈಲಿಯನ್ನು ಬಳಸಿಕೊಂಡ ಮೊದಲಿಗರು. ಅದನ್ನು ಅವರು 'ಪ್ರೀವ್ಹರ್ಸಿಗೆ ಸರಿಯಾಗುವ ಸ್ವಚ್ಛಂದ ಗೀತ ಪ್ರಕಾರವನ್ನು ಹುಟ್ಟಿಸಿಕೊಳ್ಳಲು ನಾನು ಇ.ಸ. 1920-21ರಲ್ಲಿ ಯೋಚಿಸಿ 'ನೋವಿನ ಬೆಲೆ', 'ಹಿಗ್ಗಿನ ನೆಲೆ' ಮೊದಲಾದ ವಚನಗಳನ್ನು ಬರೆದೆ' ಎಂದು 'ಉಯ್ಯಾಲೆ' ಕವನ ಸಂಕಲನದ ಮುನ್ನುಡಿಯಲ್ಲಿ ತಿಳಿಸಿದ್ದಾರೆ. ಅವರ ಕಾವ್ಯದ ಕೇಂದ್ರ ಪ್ರತಿಮೆ ತಾಯಿಯಾದುದರಿಂದ ತಮ್ಮ ಕಾವ್ಯನಾಮವನ್ನು 'ಅಂಬಿಕಾತನಯದತ್ತ' ವೆಂದಿಟ್ಟು ಕೊಂಡರು. ನಮ್ಮ ಭಾರತೀಯ ಕಾವ್ಯ ಪರಂಪರೆಯ ಭಕ್ತ ಕವಿಗಳಾದ ಶರಣರು, ದಾಸರು ತಮ್ಮ ಕಾವ್ಯದಲ್ಲಿ 'ಅಂಕಿತನಾಮ'ವನ್ನು ಬಳಸಿದಂತೆ

‘ಅಂಬಿಕಾತನಯದತ್ತ’ವನ್ನು ಅಂಕಿತವಾಗಿಯೂ ಬಳಸಿದರು. ಅವರು ‘ಅಂಕಿತ’ವಾಗಿ ಸೂಚಿಸಿರುವ ಕಾವ್ಯದಲ್ಲಿ ಅನುಭಾವದ ಸ್ಪರ್ಶವಿದೆ.

‘ಅಂಬಿಕಾತನಯನ ಜಂಬದ ಪಾಡಳಿದು
ನಂಬಿಕೆಯ ಹಾಡಾಗಿ ಬಂತಿಲ್ಲಿಗೆ.’

‘ಉಯ್ಯಾಲೆ’ಯಲ್ಲಿರುವ ‘ಕಳ್ಳಿನ ವಚನಗಳು’ ವಾತ್ಸಲ್ಯದ ರಸಲಹರಿಗಳು, ಹೆಣ್ಣು ಫಲವತಿಯಾಗಿ ಮಗುವನ್ನು ಪಡೆಯುವ ಅನುಭವ ಅವಳಲ್ಲಿ ‘ಅಲೌಕಿಕ ಶಕ್ತಿ’ಯಾಗಿ ಅರಳುತ್ತದೆ ಎಂಬ ವಚನ “ಅಲೌಕಿಕ’ ಅಲ್ಲಮನ ಬೆಡಗಿನ ವಚನಗಳಿಂದ ಪ್ರಭಾವಿತವಾಗಿದೆ.

ಕುವೆಂಪು ಅವರು ‘ರಸೋವೈಸಃ’ ಕೃತಿಯಲ್ಲಿ ರೂಪಕ ದೃಷ್ಟಿಯನ್ನು ಕುರಿತು ಹೇಳಿರುವ ‘ರೂಪಕ ಪ್ರತಿಮಾವಿಧಾನದ ಸರ್ವಲಕ್ಷಣಗಳಿಂದಲೂ ಸಂಪನ್ನ ವಾಗಿರುತ್ತದೆ. ಅದೊಂದು ಸೌಂದರ್ಯ ವಿಶೇಷ ಮಾತ್ರವಲ್ಲ. ಶಕ್ತಿ ವಿಶೇಷವೂ ಹೌದು. ಅದೊಂದು ಶಬ್ದದ ಪ್ರಕಾರ ಮಾತ್ರವಲ್ಲ; ಅರ್ಥ ಪ್ರಕಾರ ಮಾತ್ರವಲ್ಲ; ಅನುಭವ ಪ್ರಕಾರವೂ ಆಗಿದೆ. ಅದು ರಸಶಕ್ತಿಯ ಸಂಚಾರಕ್ಕೆ ಪ್ರಣಾಳಿಕೆ ಮಾತ್ರವಾಗಿರದೆ ರಸಶಕ್ತಿಯ ಉದ್ಭವಕ್ಕೆ ಆಕರವೂ, ಸ್ಥಾನವೂ ಆಗಿರುತ್ತದೆ. ಇದ್ದುದು ಯಾವುದನ್ನಾದರೂ ತೀಕ್ಷ್ಣವಾಗಿ ಹೇಳುವುದಷ್ಟೆ ಅದರ ಕೆಲಸವಲ್ಲ; ಅದುವರೆಗೂ ಇಲ್ಲದಿದ್ದುದನ್ನು ಸೃಷ್ಟಿಸುವುದೂ ಅದರ ಕರ್ತವ್ಯ... ಅಲ್ಲಿ ಉಕ್ತಿ ಪ್ರಕಾರವೆ ಅನುಭವ ಪ್ರಕಾರ. ಆಗ ಅದು ಅಲಂಕಾರವೂ ಅಲ್ಲ, ಚಮತ್ಕಾರವೂ ಅಲ್ಲ. ಅದೊಂದು ಅಪರೋಕ್ಷ ಸಾಕ್ಷಾತ್ಕಾರ, ಎಂಬ ನುಡಿ ‘ಅಲೌಕಿಕ’ ಕವನದ ರೂಪಕ ಸೃಷ್ಟಿಯಲ್ಲಿ ಸತ್ಯವಾಗಿದೆ.

ನನ್ನ ಪಂಕದಲ್ಲಿ ಹುಟ್ಟಿ ಲೇಪವಿಲ್ಲದಿರುವೆ
ನನ್ನ ಪಂಕಜವೆ!
ನನ್ನ ನೀರಲ್ಲಿ ಬೆಳೆದು ನೀರಾಳದಲ್ಲಿರುವೆ
ನನ್ನ ನೀರಜವೆ!
ಒಡೆಯಲು ಬಾರದ ಒಡಪಿನಂತಿರುವೆ,
ಬಿಡಿಸಲು ಬಾರದ ತೊಡಕಿನಂತಿರುವೆ
ನನ್ನ ಮಾನಸದ ಮದಗವೆ,
ಮುಳುಗಿ ನೋಡಿದೆ, ಮುದ್ದಿಸಿ ನೋಡಿದೆ
ಮೂಸಿ ನೋಡಿದೆ
ಮುಟ್ಟಿ ನೋಡಿದೆ, ದಿಟ್ಟಿಸಿ ನೋಡಿದೆ,
ನಿನ್ನಳವು ಅಸದಳವು.

ಬೇಂದ್ರೆಯವರು ಮಗುವನ್ನು ಒಡೆಯಲು ಬಾರದ ಒಡಪು, ಬಿಡಿಸಲು ಬಾರದ ತೊಡಕು ಎಂದು ಹೇಳುತ್ತ ‘ನನ್ನ ಮಾಸನದ ಮದಗವೆ’ ಎಂದಿದ್ದಾರೆ. ಇದು ತಾಯಿ ತನ್ನ ಮಗುವನ್ನು ಕುರಿತು ವ್ಯಕ್ತಪಡಿಸಿದ ಬೇಂದ್ರೆಪ್ರತಿಭೆಯ ಅಪೂರ್ವ

ರೂಪಕವಾಗಿದೆ. ಮದಗ ಎಂದರೆ ಕೆರೆತುಂಬಿ ಹರಿದು ಹೊರಚೆಲ್ಲಿದ ತೂಬಿನ ನೀರು. 'ನನ್ನ ಮಾನಸದ ಮದಗವೆ' ಎಂದಾಗ ತಾಯಿ ತನ್ನ ಮಗುವನ್ನು ಕುರಿತು, ತನ್ನ ಮನ ಹಾಗೂ ಜೀವ ತುಂಬಿ ಹರಿದ ಭಾವ ವ್ಯಕ್ತವಾಗಿದೆ. ಅವಳ ಚೇತನವಾದ, ಅವಳ ರೂಪು ಆದ, ಅವಳ ಒಡಲಿನಿಂದ ಹೊರ ಬಂದ ಅವಳೇ ಆದ ಮದಗ ಅದು. ತಾಯಿತನವನ್ನು ಆವಿರ್ಭವಿಸಿಕೊಂಡ ಬೇಂದ್ರೆಯವರನ್ನು ಕಂಡಾಗ, ತಾಯಿತನ ಹೆಣ್ಣಿನಲ್ಲಿ ಉಂಟು ಮಾಡುವ ಇಂದ್ರಿಯಾತೀತವಾದ ಅನುಭವವನ್ನು ಇಂದ್ರಿಯಾನುಭವವಾಗಿಸುವ ರೂಪಕಶಕ್ತಿ ಅಚ್ಚರಿಯನ್ನುಂಟು ಮಾಡುತ್ತದೆ.

ಬೇಂದ್ರೆ ಚಿಂತನೆ ಇನ್ನೂ ಮುಂದುವರಿದು ತಾಯಿಯ ಅಲೌಕಿಕ ಭಾವ ಮತ್ತೂ ಮೂರ್ತಗೊಳ್ಳುತ್ತದೆ:

ಯಕ್ಷಾಂಗುಲಿಕೆಯಂತೆ ನಿನ್ನ ತೊಟ್ಬೊ<br>
ನಿನ್ನೆಲ್ಲ ಗುಟ್ಟರಿಯೆ ನಾನು<br>
ನವೋನವ ಚಮತ್ಕಾರವೆ ನೀನಾವ ಲೋಕದ ಜೀವಿ?

ಹೀಗೆ ಮಗುವು ತಾಯಿಗೆ 'ಅಲೌಕಿಕ' ಅಧ್ಯಾತ್ಮ ಯೋಗದ ಅನುಭಾವವನ್ನು ನೀಡುತ್ತದೆ.

***

ಬೇಂದ್ರೆಯವರಿಗೆ ವಚನಗಳೆಂದರೆ 'ಮುಕ್ಕು ಚಿಕ್ಕೆಯಕಾಳು'. ಸತ್ತ್ವಭರಿತವಾಗಿ ಹೊಳಪಿನಿಂದ ಚಿಕ್ಕೆಯಂತಿರುವ ಒಂದು ಹಿಡಿಕಾಳು. ಅಂತಹ ಅಮೂಲ್ಯ ನುಡಿ ಬಿತ್ತಿ ವಚನ ರಚಿಸಿ, ಜನ ಜೀವನವನ್ನು ಪಸನುಗೊಳಿಸಿದವರು ವಚನಕಾರರು. ಆ ನುಡಿಗಳು ದೇವನೊಡೆ ನುಡಿವ ಭಾವದಲ್ಲಿ ರಚಿತವಾದವುಗಳು. ಆ ವಚನದ ಬಿತ್ತುಗಳು 20ನೇ ಶತಮಾನದಲ್ಲಿ ಮತ್ತೆ ಮೊಳಕೆಯೊಡೆದು ಪ್ರಕಾಶಗೊಳ್ಳುತ್ತಿವೆ. ಅಂತಹ ಸತ್ತ್ವಭರಿತ ವಚನವನ್ನು ಕನ್ನಡ ಸಾರಸ್ವತ ಹೊಲದಲ್ಲಿ ಬಿತ್ತಿದವರು ವಚನಕಾರರು ಎಂಬ ಚಿಂತನೆಯಿಂದ – ಅಂತಹ ಶರಣನಾಡು ಎಚ್ಚರಗೊಳ್ಳಲಿ ಎಂದು ಆಶಿಸಿ ಬೇಂದ್ರೆ ಹೀಗೆ ಕಾವ್ಯ ರಚಿಸಿದ್ದಾರೆ.

"ಬಿತ್ತಿದರೆ ಬಿತ್ತುವದು ಮುಕ್ಕು ಚಿಕ್ಕೆಯ ಕಾಳು<br>
ಮುತ್ತು ರತುನವ ಬಿತ್ತಿ ಮಾಡದಿರು ಹೊಲಹಾಳು<br>
ಜೀವವನು ಚಾಚಿ ಮುಗಿಲಂಗಳಕೆ ಹಚ್ಚಿ<br>
ದೇವನೊಡೆ ನುಡಿವಂತೆ ಮಾಡು ಮೆಚ್ಚಿ;<br>
ಏಳು ಮಲಗಿದೆಯೇಕೆ ಶರನಾಡೇ"

(ಓ ಹಾಡೇ : ಗರಿ)

12ನೇ ಶತಮಾನದಲ್ಲಿ ಬಸವ ಅಲ್ಲಮಾದಿ ಶರಣರು ನಾಡಿನಲ್ಲಿ ಉಂಟು ಮಾಡಿದ ಸಾಮಾಜಿಕ, ಆರ್ಥಿಕ, ಧಾರ್ಮಿಕ, ಸಾಂಸ್ಕೃತಿಕ ಜಾಗೃತಿಯನ್ನು

ಬೇಂದ್ರೆಯವರು ತಮ್ಮ ಆಂತರ್ಯದ ಭಾವಕೋಶವಾಗಿ ಕಾಪಿಟ್ಟುಕೊಂಡರು. ಕಳೆದ ಶತಮಾನದಲ್ಲಿ ಶರಣರ ಬಗ್ಗೆ ಹಲವು ಬಗೆಯ ಸಾಹಿತ್ಯ ರಚನೆಗಳಾಗಿದ್ದರೂ, ಕಾವ್ಯ ಮಾಧ್ಯಮದಲ್ಲಿ ಅದನ್ನು ಸಮರ್ಥವಾಗಿ ಅಭಿವ್ಯಕ್ತಿಸಿದವರು ಬೇಂದ್ರೆ.

ಕಣಸೆಂದ ಕಾಣ್ಕೆಗಳ ಕೂಟs ಕಂಡೆಯೋ
ಒಂದೊಂದು ಮೂರ್ತಿ ಒಡಮೂsಡಿ
ಆವರಣವನ್ನೆ ಒಡಗೂsಡಿ
ಸಾಕ್ಷಾತ್ತು ಆಯ್ತು ಶಿವ ಮೋಡಿsss

ಹಿಮಗಿರಿಯ ಬಾಲೆ ಹೊತ್ತಿಸಿದ ಜ್ವಾಲೆ ಅಹ ಶಿವನ ಲೀಲೆ
ಮತ್ತೂ ಮರಳಿಸಿ
ಅತ್ತತ್ತ ಏಕೆ, ಇತ್ತತ್ತ ಬರಲಿ, ಜಗದತ್ತ ಎಂದು
ಇಳೆಗೂ ಹೊರಳಿಸಿ
ಪಿಂಡಾಂಡದಲ್ಲಿ ಬ್ರಹ್ಮಾಂಡವನ್ನೆ ಉದ್ದಂಡವಾಗಿ
ಹೂ ಹೂ ಅರಳಿಸಿ
ಆ ನಂದಿಯಲ್ಲಿ ಹಲಮಂದಿಯಲ್ಲಿ ಯುಗ ಸಂಧಿಯಲ್ಲಿ
ಬಸವನ್ನಾ ಬೆಳಗಿಸಿ
ಅನುಭಾವ ಮೋಡ ಘನದಾಚೆ ನೋಡ ಸಿಡಿಲ್ ಮಿಂಚು ಕೂಡ
ಪ್ರಭುವಾಗಿ ಮೊಳಗಸಿ
ಇಹದೇವಿಯಾಗಿ, ಮಹದೇವಿಯಾಗಿ, ಬಹತಾಯಿಯಾಗಿ
ಶ್ರೀ ಶೈಲಾ ತೊಳಗಿಸಿ
ಕಲ್ಯಾಣಕಟ್ಟಿ, ಉಳವಿಯನು ಮುಟ್ಟಿ, ದಿಗ್ದೇಶ ಮೆಟ್ಟಿ
ಲಿಂಗಾಂಗs ಅಪ್ಪಿದಾ
ಮಾತೆಲ್ಲ ಜ್ಯೋತಿ, ಸರ್ವಜ್ಞ ರೀತಿ, ಬಂದೇಕೆ 'ನೇತಿ'
ಭವಿಸಂಗ ತಪ್ಪಿದಾ
ಆ ಕನ್ನಡ ನಾಡು
ನನ್ನದು.

(ನನ್ನದು ಈ ಕನ್ನಡ ನಾಡು : ನಮನ)

## ಶಿವಧ್ಯಾನದಲ್ಲಿ ಭಾವೈಕ್ಯದ ಸಾಮರಸ್ಯ

'ವೀರ ಶೈವವು ಜಾತಿಯಲ್ಲ; ಧರ್ಮದ ನೆಲೆಗೆ ಏರಬೇಕೆನ್ನುವ ಮತ ಪಂಥ. ಅವರ ಶರಣರು ನಾನಾದೇಶೀಯರು; ಶರಣರದು ಶಿಷ್ಯ ಸಂತಾನ. ಒಕ್ಕಟ್ಟಿನ ತಂತ್ರಯುಕ್ತಿ ಬೇರೆ; ಭಾವೈಕ್ಯದ ಸಾಮರಸ್ಯ ಪ್ರೀತಿ ಬೇರೆ. ವೀರಶೈವವು ಲೌಕಿಕ ಆಗಮಿಕ ಸಾಹಿತ್ಯವನ್ನು ಹುಟ್ಟಿಸಿ ಬೆಳೆಸಿ ಕನ್ನಡವನ್ನು ಸಮೃದ್ಧಗೊಳಿಸಿದೆ. ವಚನ

ಸಾಹಿತ್ಯಕ್ಕೆ ತವರಾಗಿದೆ,'[1] ಎಂದು ಬೇಂದ್ರೆ ಹೇಳಿದ್ದಾರೆ. ಕಾವ್ಯ ಹಾಗೂ ಅನುಭಾವವನ್ನು ವಿವರಿಸುತ್ತಾ ಅವರು 'ಕಾವ್ಯದ ಮೇಲ್ಮೆಯು ರಸಧ್ವನಿಯಲ್ಲಿಲ್ಲ; ಆದರೆ ಆ ರಸಧ್ವನಿಯಲ್ಲಿ ಧ್ವನಿತವಾಗುವ ಆನಂದ ಜೀವನದ ಪ್ರತೀತಿಯ ಮೇಲ್ಮೆಯಲ್ಲಿದೆ. ಪ್ರತೀತಿಯ ಜೀವನವೇ ತಿರುಳು, ಉಳಿದದ್ದು ಸಿಪ್ಪೆ. ಈ ಪ್ರತೀತ ಜೀವನ ಪರ್ವತದ ಉತ್ತುಂಗ ಶಿಖರದಲ್ಲಿ ಆತ್ಮವಿದ್ಯೆಯ ನಿಲುವನೆಯಿದೆ. ಅದೇ ಅನುಭಾವದ ಬೀಡು'. 'ಅನುಭಾವವೆಂಬುದು ತಾನಾರೆಂಬುದ ತೋರುವದು. ಅನುಭಾವವೆಂಬುದು ನಿಜನಿವಾಸದಲ್ಲಿರಿಸುವುದು' 'ಅನುಭಾವವಿಲ್ಲದ ಭಕ್ತಿ ಅನುವಿಂಗೆ ಬಾರದು.' 'ಅನುಭಾವವಿಲ್ಲದ ಭಕ್ತಿ ಲಿಂಗಸಮರಸ ಸುಖವನೀಯದು. ಅನುಭಾವವಿಲ್ಲದೆ ಅರಿಯಬಾರದು,' 'ಅರಿವಿನ ತೃಪ್ತಿಗೆ ಅನುಭಾವವೇ ಆಶ್ರಯ' ಎಂದು ಮುಂತಾಗಿ ಶಿವಶರಣರು ಹೊಗಳಿದ ಅನುಭಾವದಲ್ಲಿ ಕಾವ್ಯದ ಉಗಮವಿದೆ'[2] ಎಂದು ತಿಳಿಸಿದ್ದಾರೆ.

ಬಸವಾದಿ ಶರಣರ ಚಳುವಳಿಯು ಜನಪದರನ್ನು ಜಾಗೃತಗೊಳಿಸಿ ಸಾಂಸ್ಕೃತಿಕ ಕ್ರಾಂತಿಯನ್ನುಂಟುಮಾಡಿತು. ಸಂಸ್ಕೃತಿ ಏಕರೂಪದ ಪಂಡಿತರ ಶಾಖೆಯನ್ನು ಪೋಷಿಸುತ್ತಿರುವಾಗ, ಬಹುಸಂಸ್ಕೃತಿ ಪರ್ಯಾಯ ಜ್ಞಾನಶಾಖೆ ಬೆಳೆಯುವಂತೆ ಶರಣರು ಕನ್ನಡವನ್ನು ತಮ್ಮ ಸಂವಹನ ಭಾಷೆಯಾಗಿ ಕಟ್ಟಿ ಬೆಳೆಸಿದರು. ಅದು ನಾಡಿನ ಎಲ್ಲ ದುಡಿಯುವ, ನಿರ್ಲಕ್ಷಿತ ದಲಿತ, ಬಡವ, ಪತಿತರ ಭಾವಭಿವ್ಯಕ್ತಿಯ ಉಸಿರಾಯಿತು. ತಮ್ಮ ಕಸುಬಿನ ಶ್ರಮದಲ್ಲಿ ತಮ್ಮ ನಂಬಿಕೆಯ ದೈವವನ್ನು ನೆನೆಯುತ್ತಿದ್ದ ಅವರಿಗೆ ಶಿವನ ಆರಾಧನೆ ಮತ್ತು ಭಕ್ತಿ ಒಂದುಗೂಡಿಕೆಯ ಬಾಂಧವ್ಯದ ಬೆಸುಗೆಯಾಯಿತು. ಅವರ ಜೀವಭಾವದ ಮಿಡಿತವಾಗಿದ್ದ ಲೋಕಾನುಭವ ವಚನವಾಗಿ ಹೊರಹೊಮ್ಮಿತು. ತುಳಿತಕ್ಕೆ ಒಳಗಾಗಿದ್ದ ಅವರು ತಮ್ಮ ವ್ಯಕ್ತಿತ್ವದ ಅನನ್ಯತೆಯು ನುಡಿಯಲ್ಲಿ ಪ್ರಕಾಶಗೊಂಡದ್ದು ಕಂಡು ಬೆರಗಾದರು. ತಮ್ಮ ಆಂತರ್ಯದ ಸತ್ಯದಂತೆ ನಡೆಯುತ್ತಾ ನುಡಿನಡೆ ಒಂದಾಗಿ ಮಾದರ ಚೆನ್ನಯ್ಯ, ಡೋಹರ ಕಕ್ಕಯ್ಯ, ಮಡಿವಾಳ ಮಾಚಯ್ಯ ಮುಂತಾದವರು ಅನುಭವ ಮಂಟಪದ ಭಾಗವಾದರು. ಜಾತಿಮತ, ವರ್ಗವರ್ಣ, ಹೆಣ್ಣುಗಂಡು ಭೇದದಿಂದ ಮುಕ್ತರಾಗಿ – ಸಾವಿರಾರು ವರ್ಷಗಳಿಂದ ಒತ್ತಿ ಹಿಡಿಯಲ್ಪಟ್ಟ ಅಸಮಾನತೆಯ ಹಿಂಸೆ ನೋವುಗಳಿಂದ ಮುಕ್ತರಾದರು. ಅವರು ತಮ್ಮ ಒಳಮನದ ಸತ್ಯ ಚಿಗುರಿ ವಚನವಾಗಿ– ಓದುಬಲ್ಲ ಮೇಲ್ವರ್ಗದ ಜನಕ್ಕೆ ಸಮನಾಗಿ ಬದುಕಿ ಬಾಳುವ ಅವಕಾಶ ಒದಗಿಸಿದ ಅಲ್ಲಮ, ಬಸವ, ಅಕ್ಕ ಮಹಾದೇವಿ ಮುಂತಾದ ಶರಣರ ಬಳಗದ ಭಾಗವಾಗಿ ಹೋದರು. ರಕ್ತಪಾತರಹಿತ ಶಾಂತ ಸಾಮಾಜಿಕ ಕ್ರಾಂತಿ ಅವರನ್ನು ಒಂದುಗೂಡಿಸಿದ್ದು ಶಿವನಭಕ್ತಿ, ಕಾಯಕತತ್ವದ ಬದುಕು, ದಾಸೋಹದ ಆಹ್ಲಾದ, ಅಧ್ಯಾತ್ಮದ ಅರಿವು.

ಆ ಐತಿಹಾಸಿಕ ಘಟನೆಯನ್ನು ಕುರಿತು ಬೇಂದ್ರೆಯವರು ಹೀಗೆ ಹೇಳಿದ್ದಾರೆ, 'ಕನ್ನಡ ಶಿವಶರಣರು ತಮ್ಮ ಭಕ್ತಿಯ ಯುಕ್ತಿಯಿಂದ ಕೈಲಾಸವನ್ನೇ ಕಲ್ಯಾಣಕ್ಕೆ

ತರಲು ಮಾಡಿದ ಅದ್ಭುತ ಸಾಧನೆಯು ಕನ್ನಡದ, ಅದೇಕೆ ಭಾರತದ, ಅಷ್ಟೇಕೆ ಈ ಇಡೀ ಜಗತ್ತಿನ ಇತಿಹಾಸದಲ್ಲಿಯೇ ರೋಮ ಹರ್ಷಕವಾಗಿದೆ.'[3]

ಪ್ರಕಾಶ ಮಹಾಲಿಂಗ

ಶಿವಧ್ಯಾನಿಯಾದ ಬೇಂದ್ರೆಯವರು ಪ್ರಕೃತಿಯಲ್ಲಿ ಕಂಡ ಲಿಂಗ ವೈಭವ ಭಾರತೀಯ ಸಾಹಿತ್ಯದಲ್ಲಿಯೇ ವಿಶಿಷ್ಟವಾಗಿದೆ. ನಿಸರ್ಗದಲ್ಲಿರುವ ಸಮತಾತತ್ವ, ಅದರ ಅಮೃತ ಪೋಷಣೆಯಿಂದ ಬದುಕುವ ಸಕಲ ಜೀವರಾಶಿ, ಅಲ್ಲಿ ನಂಬಿಕೆಗೆ ಇಂಬಾದ ಶಿವನ ರೂಪು ಬೇಂದ್ರೆಯವರ ಶಿವಾನುಭವ. ಅವರ 'ದವನ ಹುಣ್ಣಿಮೆಯ ಜಾತ್ರೆಯ ರಾತ್ರಿ' ಕವನ ಶಿವನ ಪ್ರತೀಕ.

ಇಗೊ ಬಂತು ದವನದ್ಹುಣ್ಣಿವಿ ಬಿಚ್ಚಿ ಕಣ್ಣವಿ ಕುಡಿದು ಅಮೃತಾ
ಕಂಡವರಿಗುಣಿಸಿ ಸಮತಾ ॥ಪ॥

***

ಹಣ್ಣಾದ ಬಿಸಿಲ ಬಣ್ಣಾನ ಕಳತು ಬೆಳದಿಂಗಳಾತೊ ಏನೋ
ಹರದಽದ ಬಾನ ಜೇನೋ ॥
ದನಿಮ್ಯಾಲೆ ದನಿಯನೆತ್ತೆತ್ತಿ ಓಲಗಾ ಏರತಾವ ಹ್ಯಾಂಗ
ಗೋಪುರ ಕಟ್ಟಿಧಾಂಗ ॥
ಆಕಾಶ ಅನಸತದ ಗುಡಿಯ ಹಾಂಗ ಪ್ರಕಾಶ ಮಹಾಲಿಂಗ
ನೆಲ ಅಗಲ ಪೀಠಧಾಂಗ ॥
(ದವನದ ಹುಣ್ಣಿಮೆಯ ಜಾತ್ರೆಯ ರಾತ್ರಿ : ಹಾಡು ಪಾಡು)

'ನನ್ನ ಕಣ್ಣೇ ಕಿವಿಯು, ಕವಿಯು ನಾನು' ಎಂದು ಹಾಡಿದ ಬೇಂದ್ರೆಯವರಿಗೆ 'ಕಿವಿಯೆ ಕವಿ'. ಶ್ರಾವಣ ಕುತೂಹಲದ, ಜೀವದಾಧಾರ ಮಳೆಯ ಸುಂದರ ಪ್ರಕೃತಿಯ ಮಾಸ. ಅದು ಚೆಲುವು ಒಲವುಗಳೊಂದಿಗೆ ಬೇಂದ್ರೆಯವರ ಸೃಜನಶೀಲತೆ ಮತ್ತು ಜಿಜ್ಞಾಸೆ ರೂಪುಗೊಂಡು ವಿಕಾಸಗೊಳ್ಳಲು ಸ್ಫೂರ್ತಿಯ ನೆಲೆಯಾದ ಮಾಸ. ಅವರು ಶ್ರಾವಣದ ನಾದ ಮಾಧುರ್ಯಕ್ಕೆ ಶ್ರುತಿಗೊಂಡ ಕಿವಿಯನ್ನು ಕವಿಯಾಗಿಸಿದ 'ಶ್ರವಣ ಪ್ರತಿಭೆ' ಯ ಕವಿ. ಕಣ್ಣನ್ನೇ ಕಿವಿಯಾಗಿಸಿ ಸೌಂದರ್ಯಾರಾಧನೆ ಮಾಡಿದ ಕವಿ. ಕನ್ನಡದ ಇತರ ಕವಿಗಳು ವಸಂತವೆಂಬ ಶೃಂಗಾರ ಮಾಸಕ್ಕೆ ಮರುಳಾಗಿದ್ದರೆ, ಬೇಂದ್ರೆಯವರು ಅನ್ನದ ಮಾಸ ಶ್ರಾವಣದ ಕವಿಯಾಗಿದ್ದಾರೆ. ಶ್ರಾವಣಮಾಸದಲ್ಲಿ ಧಾರವಾಡದ ಆಕರ್ಷಕ ನಿಸರ್ಗ ಸೌಂದರ್ಯ ಅನುಭವಿಸಿದ ಕವಿಯ ಆನಂದ ಶ್ರಾವಣದ ಹಾಡುಗಳಾಗಿವೆ. ಅವರಿಗೆ ಶ್ರಾವಣ ಮಾಸವು ಸುಖ-ಸಂತೋಷ, ಬೇಸರ – ದುಃಖ ಮೇಳೈಸಿ ತರುವ ಮಾಸವಾಗಿದೆ.

'ರಸವೆ ಜನನ
ವಿರಸ ಮರಣ
ಸಮರಸವೇ ಜೀವನ'

ಎಂಬ ತತ್ವ ಬೋಧಿಸಿದ ಮಾಸವಾಗಿದೆ.ಶ್ರಾವಣ ಬೇಂದ್ರೆಯವರಿಗೆ ಭಗವಾನ್ ಶ್ರೀಕೃಷ್ಣನ ಜನನ; ಮಹರ್ಷಿ ಶ್ರೀ ಅರವಿಂದರ ಜನನ; ತನ್ನ ಮಕ್ಕಳಾದ ವಾಮನ, ಮಗಳಾರ ಜನನ ಹಾಗೂ ರಾಷ್ಟ್ರಕ್ಕೆ ಸ್ವಾತಂತ್ರ್ಯ ತಂದ ರಸಾನಂದದ ಮಾಸವಾಗಿದೆ. ಹಾಗೆಯೆ ಗೆಳೆಯ ಚೆನ್ನಮಲ್ಲಪ್ಪ, ತಾಯಿ ಅಂಬವ್ವ, ಪತ್ನಿ ಲಕ್ಷ್ಮೀಬಾಯಿ ತೀರಿಕೊಂಡ ನೋವಿನ ಮಾಸವಾಗಿ 'ಸಮರಸವೇ ಜೀವನ' ಎಂದು ಕವಿ ಭಾವ ಬೆಳಗುವಂತೆ ಮಾಡಿದ ಮಾಸವಾಗಿದೆ.

ಅವರು ಶ್ರಾವಣವನ್ನು ಕುರಿತು 'ಮತ್ತೆ ಶ್ರಾವಣಾ', 'ಶ್ರಾವಣದ ಹಗಲು', 'ಮಿಂಚು', 'ಮಳೆಗಾಲ', 'ಮತ್ತೆ ಬಂತು ಶ್ರಾವಣಾ' ಎಂಬ ಹಲವಾರು ಕವನಗಳನ್ನು ರಚಿಸಿದ್ದಾರೆ. ಅವರಿಗೆ ಶ್ರಾವಣ ಕುರಿತು ಕಾವ್ಯರಚಿಸುವುದೇ ಆನಂದವಾಗಿತ್ತು. 'ಪ್ರತಿವರ್ಷದಂತೆ ಬಂತುs ಶ್ರಾವಣ' ಎಂಬ ಕವನದಲ್ಲಿ ಶ್ರಾವಣವನ್ನು 'ಜಗದ ಜೀವನಾ, ಕರುಳ ಹೂವಣಾ, ಇದು ಜೀವದಾಕರ್ಷಣ' ಎಂದು ಬಣ್ಣಿಸುತ್ತ 'ಅಂಬಿಕಾತನಯದತ್ತ'ರು ಅದರ ಹುಚ್ಚಿನಲ್ಲಿ ಮದೋನ್ಮತ್ತರಾಗಿದ್ದಾರೆ.

ಶ್ರಾವಣಕ ತಪ್ಪಿತಗ್ಯಾನಾ
ಎಲ್ಲಿದೋ ಧ್ಯಾನಾ
ಹುಚ್ಚ ಆಗ್ಯಾನ
ಮದೋನ್ಮತ್ತಾ
ಅಂಬಿಕಾತನಯ ದತ್ತ,

ಅವರು 'ಶ್ರಾವಣ' ಕವನದಲ್ಲಿ ಕಡಲಿನ ಮೇಲೆ ಸುರಿಯುವ ಮಳೆಯನ್ನು 'ಕುಣಿದ್ಹಾಂಗರಾವಣ' – ಹತ್ತು ತಲೆಯ ರಾವಣ ಕುಣಿದಂತ ವೈಭವ ಎಂಬ ಅದ್ಭುತ ಪ್ರತಿಮೆಯಲ್ಲಿ ಬಣ್ಣಿಸಿದ್ದಾರೆ. ಆಗ ಬೀಸುವ ಗಾಳಿ 'ಭೈರವನ ರೂಪ ತಾಳಿ' ಭಯಂಕರ ಅಲ್ಲೋಲಕಲ್ಲೋಲವನ್ನುಂಟು ಮಾಡಿತ್ತು ಎಂದು ಮಳೆಯ ಆರ್ಭಟವನ್ನು ಶಿವೋಪಾಸಕ ರಾವಣ ಹಾಗೂ ಶಿವನಭೈರಾಗಿ ರೂಪದಲ್ಲಿ ನೀಡಿದ್ದಾರೆ. ಅವರು ತಮ್ಮ ಘನ ಶಿವಪೂಜೆಯಲ್ಲಿ ಪ್ರಕೃತಿ ಒಂದಾದಂತೆ ಪ್ರತಿಗುಡ್ಡವು ಸ್ಥಾವರಲಿಂಗವಾಗಿದ್ದು ಅದಕ್ಕೆ ಮಳೆಯ ಅಭ್ಯಂಜನ ನಡೆಯುತ್ತಿದೆ ಎಂದು ಸುತ್ತಮುತ್ತ ನೆರೆದ ಮೋಡ ನೋಡಿ ನಲಿದಿದ್ದಾರೆ.

ಶ್ರಾವಣಾ ಬಂತು ಕಾಡಿಗೆ । ಬಂತು ನಾಡಿಗೆ ।
ಬಂತು ಬೀಡಿಗೆ । ಶ್ರಾವಣಾ ಬಂತು ।

ಕಡಲಿಗೆ ಬಂತು ಶ್ರಾವಣಾ । ಕುಣಿದ್ಹಾಂಗ ರಾವಣಾ ।
ಕುಣಿದಾವ ಗಾಳಿ। ಭೈರವನ ರೂಪತಾಳಿ ॥

***

ಗುಡ್ಡ ಗುಡ್ಡ ಸ್ಥಾವರಲಿಂಗ
ಅವಕ ಅಭ್ಯಂಗ ।
ಎರಿತಾವನ್ನೊಹಾಂಗ ।
ಕೂಡ್ಯಾವ ಮೋಡ । ಸುತ್ತೆಲ್ಲ ನೋಡ ನೋಡ ॥

(ಶ್ರಾವಣ : ಹಾಡುಪಾಡು)

ಬೇಂದ್ರೆಯವರ 'ಸಣ್ಣ ಸೋಮವಾರ' ಧಾರವಾಡದ ಪರಿಸರದಲ್ಲಿ ಅರಳಿದ ಅವರ ಆಸ್ತಿಕ ಭಾವ ಬೆಳೆದು ಅಧ್ಯಾತ್ಮಿಕ ಅನುಭಾವವಾದುದರ ಬಗೆಯನ್ನು ತಿಳಿಯ ಹೇಳುವ ಕವನ. ಧಾರವಾಡದ ಹಳ್ಳಿಗರ ಬಾಯಲ್ಲಿ ಶ್ರಾವಣವು 'ಸಣ್ಣ' ಆಗಿ ಬಳಕೆಯಲ್ಲಿದೆ. ಜನಮಾನಸದ ಕವಿಯಾದ ಬೇಂದ್ರೆಯವರು ಶ್ರಾವಣದಲ್ಲಿ ಜನ ಸೋಮೇಶ್ವರನ ಜಾತ್ರೆಗೆ ಸಾಗುವ ಆನಂದವನ್ನು ಬಣ್ಣಿಸುತ್ತ ನಲಿದಿದ್ದಾರೆ. ಅವರ ಧಾರವಾಡದ ನೆಲೆಗಟ್ಟು ಭಾರತೀಯ ಧಾರ್ಮಿಕ ಹಿನ್ನೆಲೆಯಲ್ಲಿ ಹೊಮ್ಮಿ ಒಂದು ಕಾಲದ ಮಿತಿಯ ಅನುಭವ ಸಾರ್ವಕಾಲಿಕವಾಗಿ, ಸೋಜಿಗದ ಚಿಕ್ಕಂದಿನ ನಂಬಿಕೆಯ ಭಾವ ಪ್ರಕೃತಿ ಸಹಜವಾಗಿ ಈ ಕವನದಲ್ಲಿ ಮೂಡಿದೆ.

ಬಂತಣ್ಣ ಸಣ್ಣ ಸೋಮವಾರ
ಕಾಣಬೇಕಣ್ಣ ಸೋಮೇಶ್ವರಾ ॥ಪಲ್ಲ॥

ಎಂಬ ಪ್ರಾರಂಭದ ನುಡಿಯಲ್ಲಿ ತನ್ನ ಎಪ್ಪತ್ತನೇ ವಯಸ್ಸಿನಲ್ಲಿ ಬಾಲ್ಯದ ನೆನಪನ್ನು ಮಾಡಿಕೊಳ್ಳುತ್ತಿರುವ ಕವಿಯಲ್ಲಿ ಆ ಸೋಮೇಶ್ವರನ ಕಾಣ್ಕೆಯ ಭಾವವಿದೆ. ತನ್ನ ಬಾಲ್ಯದ ಸುಂದರ ಚಂಚಲತೆ, ಮಕ್ಕಳಾಟ, ನೋಟ, ಹಸಿರುತೋಟ, ಸುತ್ತಮುತ್ತಲ ಪಯಿರಿನ ಮಾಟ; ಮುಗಿಲು, ಮೋಡ; ಮಿಂಚು, ಗುಡುಗು, ಚಳಿಗಾಳಿಯ ಬೆಡಗಿಗೆ ಪಕ್ಕದ ಮನಸ್ಸಿದೆ. ಶ್ರಾವಣ ಮಾಸದಲ್ಲಿ ಕವಿಯಲ್ಲಿನ ಶ್ರಾವಣ ಪ್ರತಿಭೆಯನ್ನು ಜಾಗೃತಗೊಳಿಸಿದ ಪ್ರಕೃತಿಯಿದೆ. ಆ ಪ್ರಕೃತಿಯಲ್ಲಿ ಸೋಮೇಶ್ವರನನ್ನು ನೋಡಲು ಹೋಗುವಾಗಿನ ಬಿಡುವು ಮನಸ್ಸು ಮತ್ತು ಮಕ್ಕಳಿಗೆ ಇಷ್ಟವಾದ ಫರಾಳದ ರುಚಿಯಿದೆ.

ನಾ ಮುಂದ ನೀ ಮುಂದ
ನಡಗೀಯು ತರತರದಿಂದ
    ಸಾಲಿsಗೆ ಸೂಟಿ, ಎಂಥ ಹ್ವಾರೆ?
ಕಾಯಿಕಪ್ಪುರ ಕಟ್ಟಿಕೊಂಡು
ಬೆಲಪತ್ರಿ ಹಿಡಕೊಂಡು
    ಸಂಗಾಟ ಫರಾಳಬ್ಯಾರೆ,

ಸೋಮೇಶ್ವರನನ್ನು ಕಾಣಲು ಹೋಗುವಾಗಿನ ಭಜನೆಯ ಮ್ಯಾಳದ ದನಿ 'ಅಲ್ಲಾ ದೂರಾ ಅಲ್ಲಸನಿ' ಎಂಬ ಸೋಮೇಶ್ವರನ ಅನುಭವವಾಗಿ ನಡುವೆ ಕೂಗುವ ಕೋಗಿಲೆಯ ಧ್ವನಿ ಅಧ್ಯಾತ್ಮಿಕ ಅನುಭವದ ಕೂಗಾಗಿ, ಮಾನಸ ಸರೋವರ ಹೊಕ್ಕು 'ಹರಹರ ಮಹಾದೇವ' ಎಂಬ ಭಾವದಲ್ಲಿ ಜೀವ ಈಸಾಡುವ ಅನುಭವ

ನೀಡುತ್ತದೆ. ಆ ಕೋಗಿಲೆಯ ಧ್ವನಿ ವಾಸ್ತವಿಕ ಅರಿವನ್ನು ನೀಡುತ್ತಾ ಅಧ್ಯಾತ್ಮಿಕ ಸ್ತರಕ್ಕೊಯ್ಯುವ ಅಲೌಕಿಕ ಧ್ವನಿಯಾಗಿದೆ. ಭಜನೆಯ ಧ್ವನಿ ನಿರ್ದಿಷ್ಟತೆ ಸೂಚಿಸಿದರೂ ಸುತ್ತಲ ಬದುಕಿನ, ವಾಸ್ತವದ ಅರ್ಥಬಂಧದ ಜೊತೆಗೆ– ಆ ಕೋಗಿಲೆಯ ಧ್ವನಿ ದೇವರು – ಭಕ್ತ, ಜೀವ – ಮಹಾದೇವ ಸಂಬಂಧ ಕಲ್ಪಿಸುವ ಅಧ್ಯಾತ್ಮಿಕ ಸೇತುವಾಗಿ ಬಂದಿದೆ. ಆ ಧ್ವನಿ ಸಾಮಾನ್ಯತೆಯನ್ನು ಅಸಾಮಾನ್ಯತೆಗೆ ಕರೆದೊಯ್ಯುವ ಸಾಧನದ ಸಂಕೇತವಾಗಿ ಕಾವ್ಯದಲ್ಲಿ ಮೂಡಿದೆ. ಆ ಸುತ್ತಲ ವಾತಾವರಣದಲ್ಲಿ ಸೋಮೇಶ್ವರನನ್ನು ಕಂಡಾಗ ಮನದ ಮೇಲಾಗುವ ಪ್ರಭಾವ:

ಗರ್ಭಗುಡಿಯೊಳಗ ಲಿಂಗ
ನಿದ್ದಿಯೊಳಗs ನೋಡಿಧಾಂಗ
ಕಣ್ಣು ಮುಚ್ಚತಾವ ನಮೋ ಎಂದು.

ಗವೀಯೊಳಗಿನ ದಾರಿ
ಹರದಾರಿ ಹರದಾರಿ
ಮಿಂಚಿತ್ತು ಚಂದ್ರಕ್ವಾರಿ ಒಂದು.

ನಿಂತs ಮೈಯಾಗಿ ಖಂಬ
ಸೋರ್‍ಯಾವ ಜಂಬಗಿಂಬ
ಹಿಡಿದಾನ ಕೈಯ್ಯ ಶಿವನೆ ಬಂದು.

(ಸಣ್ಣ ಸೋಮವಾರ : ಮುಗಿಲ ಮಲ್ಲಿಗೆ)

ಎಂಬ ಆಸ್ತಿಕ ಭಾವದಿಂದ ನಮೋ ಎಂದು ಕಣ್ಣು ಮುಚ್ಚಿದಾಗ ಮನದ ಒಳಹಾದಿಯಲ್ಲಿ ಹರದಾರಿಯಲ್ಲಿ, ಶಿವನದಾರಿಯಲ್ಲಿ; ಹರದಾರಿ ಹರದಾರಿ ಹರಿದು ಸಾಕಷ್ಟು ಸಾಗಿದಾಗ ಚಂದ್ರನ ಬೆಳಕು ಗೋಚರಿಸಿ, ಮೈಕಂಬವಾಗಿನಿಂತು; ಜಂಬಗಿಂಬ ಎಲ್ಲ ಸೋರಿ – ಶಿವನೆ ಬಂದು ಕೈಹಿಡಿದ ಭಾವ ಮನದುಂಬುತ್ತದೆ. ಮಹಾದೇವನ ಅರಿವು ಒಂದು ಬಗೆಯ ನಿದ್ದೆಯೊಳಗೆ ನೋಡಿದ ಭಾವ ತಂದರೂ ಅದರ ದಾರಿ ಹರದಾರಿಯ ರೀತಿಯಲ್ಲಿ ಕಾಣಿಸುವುದು ಭಗವಂತನನ್ನು ಅನುಭಾವಿಸುವ ಪರಿ.

**ಭಕ್ತ ಕರಣಗಳು**

'ಭಕ್ತನಾದೆನೆಂದು ನಚ್ಚದಿರೋ ಅಣ್ಣಾ,
ನಿನ್ನ ಕರಣಾದಿಗಳ ಭಕ್ತರ ಮಾಡಯ್ಯಾ'

ಎಂದು ಚೆನ್ನಬಸವಣ್ಣ ತಿಳಿಸಿದ್ದಾರೆ. ಅದೇ ಭಾವದಲ್ಲಿ ಚಿಂತಿಸುತ್ತ ಬೇಂದ್ರೆಯವರು ಶಿವಾರಾಧನೆಯಲ್ಲಿ ಕರಣಾದಿಗಳ 'ಒಳಹೊದಿಕೆ ಮಾಗಿ ಬಲಗೊಳ್ಳಲಿ' ಎಂದು ಆಶಿಸಿ 'ಆಪ್ಯಾಯನ' ಕವನ ರಚಿಸಿದ್ದಾರೆ. ಲಿಂಗಾನುಭವದಲ್ಲಿ ಒಂದಾದ ಇಂದ್ರಿಯಗಳು ತೃಪ್ತಿ ಹೊಂದುವ ಸುಖ 'ಆಪ್ಯಾಯನ'. ಲಿಂಗ ಅಂಗ ಒಂದಾಗುವುದೆ ಕೂಡಲಸಂಗ.

ಓ ಲಿಂಗವೆ, ಓ ಅಂಗವೆ, ಓ ಕೂಡಲ ಸಂಗಾ ।
ಓಂ ಆಪ್ಯಾಯನ ಪಡೆಯಲಿ ಈ ಅಂಗಾಂಗಾs
ನುಡಿ ಉಸಿರೂ ಕಣ್‌ಕಿವಿಯೂ ಒಳಹೊಂದಿಕೆ ಮಾಗಿ
ಬಲಗೊಳ್ಳಲಿ ಇಂದ್ರೇಂದ್ರಿಯ ಅದರಿಂದಾಗಿ.

(ಆಪ್ಯಾಯನ : ಹೃದಯ ಸಮುದ್ರ)

**ಪ್ರಾಣ – ಲಿಂಗ – ಶಕ್ತಿ**

'ಸಪ್ತವ್ಯಸನಗಳನ್ನು ಬಿಟ್ಟು ಲಿಂಗವ್ಯಸನಿಯಾಗಿರುವವನು ಪ್ರಾಣಲಿಂಗ ಸಂಬಂಧಿಯೆಂದೂ; ಹಸಿವು, ತೃಷೆ, ವಿಷಯ, ನಿದ್ರೆ, ಜಾಡ್ಯ ಇವುಗಳನ್ನೆಲ್ಲ ಪರಿಹರಿಸಿಕೊಂಡು ನಿರ್ಮಲದೇಹಿಯಾಗಿ, ಹೃದಯ ಕಮಲದಲ್ಲಿ ಪರಿಶುದ್ಧನಾದ ಗುರುಮೂರ್ತಿ ಪರಂಜ್ಯೋತಿ ಎಂದೆನಿಸುವ ಲಿಂಗವನ್ನು ಮಲಿನವಿಡಿಯದ ಕಾಯದ ಸಜ್ಜೆಯಲ್ಲಿ ದೃಢವಾಗಿ ಸೇರಿಸಿ, ಸಪ್ತಧಾತು ಅಷ್ಟಮದವಿಲ್ಲದೆ ಜ್ಞಾನದ ಓಗರವನ್ನು ಅರ್ಪಿಸಿ ಸುಜ್ಞಾನ ಬುದ್ಧಿಯಿಂದ ಪ್ರಸಾದವನ್ನು ಸ್ವೀಕರಿಸಿ ನಿತ್ಯಸುಖಿಯಾಗಿ ಆಡುತ್ತಿರುವವನು ಪ್ರಾಣಲಿಂಗ ಸಂಬಂಧಿ' ಯೆಂದು ಚೆನ್ನ ಬಸವಣ್ಣನು ಹೇಳುವನು.[4]

ವಚನಕಾರರ ಚಿಂತನೆಯಂತೆ ಶಿವಶರಣರು ಪ್ರಾಣ – ಲಿಂಗ – ಶಕ್ತಿಯ ಅರಿವಿನಲ್ಲಿ ಒಂದಾಗಿ ಧ್ಯಾನಿಸಲು ಬೇಂದ್ರೆ ಕರೆ ನೀಡಿದ್ದಾರೆ.

ಓಂ ನಮಃ ಶಿವಾಯ ಎಂದು
ಪ್ರಾಣ – ಲಿಂಗ – ಶಕ್ತಿ – ಒಂದು
ಅನುಗ್ರಹವ ತಾಳುವಾ.

ಏಕಾತ್ಮದ ಶರಣರಾಗಿ
ದಿವ್ಯಸೃಷ್ಟಿಕರಣರಾಗಿ
ವಿಗ್ರಹದೊಲು ಬಾಳುವಾ

(ಒಂದು–ಹಲವು : ಹೃದಯ ಸಮುದ್ರ)

**ಇಷ್ಟ ಲಿಂಗ**

'ಗುರುವು ಅನುಗ್ರಹಿಸಿದ ಲಿಂಗ. ಮುಕ್ತಿಯನ್ನು ಬಯಸುವುದಾದರೆ ಇದನ್ನು ಶರೀರದಲ್ಲಿ ಹೆರಹಿಂಗದೆ ಧರಿಸಿರಬೇಕು ಎಂದು ಚೆನ್ನಬಸವಣ್ಣ ಹೇಳುವನು.

ಆಚಾರ ಅಂಗದ ಮೇಲೆ ಆಯತವಾದುದೆ ಇಷ್ಟಲಿಂಗ. ಆ ಇಷ್ಟಲಿಂಗ ವಿಡಿದಿರುವುದೆ ಪ್ರಾಣಲಿಂಗ ಸ್ವಾಯತ. ಪ್ರಾಣಲಿಂಗ ಉದಯಿಸಿದಲ್ಲದೆ ಇಷ್ಟಲಿಂಗವನ್ನು ಕಾಣಬಾರದು; [5]

ಇಷ್ಟಲಿಂಗ ಶರಣರ ದೃಷ್ಟಿಯಲ್ಲಿ ಸಮಾನತೆಯ ಸಂಕೇತವಾಗಿತ್ತು 'ವಿಪ್ರ ಮೊದಲು ಅಂತ್ಯಜ ಕೊನೆಯಾಗಿ' ಎಲ್ಲರನ್ನೂ ಒಂದೇ ವೇದಿಕೆಯ ಮೇಲೆ ತರಲು ಇಷ್ಟಲಿಂಗ ಒಂದು ಸಾಧನವಾಗಿತ್ತು. ದೇವಾಲಯಗಳನ್ನು ನಿರಾಕರಿಸಲು,

ಪುರೋಹಿತರನ್ನು ದೂರವಿಡಲು, ತಮ್ಮ ಮೋಕ್ಷ ತಾವೇ ಕಂಡುಕೊಳ್ಳಲು ಇಷ್ಟಲಿಂಗ ಒಂದು ಮಾಧ್ಯಮವಾಗಿತ್ತು.

ಶರಣನು ಇಷ್ಟಲಿಂಗವನ್ನು ಪೂಜಿಸುತ್ತ ನಿಶ್ಶಬ್ದ ಮತ್ತು ಸ್ಥಿರಮನಸ್ಸಿನಿಂದ ಶಿವಧ್ಯಾನದಲ್ಲಿ ಲೀನವಾಗುತ್ತಾನೆ. ಅದು Single point Contemplation ಅದರಿಂದ ಮನಸ್ಸು ಪ್ರಶಾಂತವಾಗುತ್ತದೆ. ದೇಹವು ಶಕ್ತಿ ಚೈತನ್ಯಭರಿತವಾಗುತ್ತದೆ. ಹಾಗೆ ಶಿವನಿಗೆ ಅರ್ಪಿಸಿಕೊಳ್ಳುತ್ತಾ ಅಂದಿನ ಬದುಕನ್ನು ಹೇಗೆ ಉತ್ತಮವಾಗಿ ನಡೆಸಬೇಕೆಂದು ಆಲೋಚಿಸಿ ಅದರಂತೆ ನಡೆಯುತ್ತಾನೆ.

ಪ್ರತಿವ್ಯಕ್ತಿ ತನ್ನ ಇಷ್ಟದೈವವನ್ನು ಆರಾಧಿಸುತ್ತ ಅದನ್ನು ಆಂತರ್ಯದ ಭಾವವಾಗಿಸಿಕೊಂಡಾಗ ಅವನು ಇತರ ಧರ್ಮಗಳವರ ನಂಬಿಕೆಯನ್ನು ಗೌರವಿಸುವವನಾಗುತ್ತಾನೆ. ಅದರಿಂದ ವಿವಿಧ ಧರ್ಮಗಳಲ್ಲಿ ಸಾಮಾಜಿಕ ಸಾಮರಸ್ಯ ಸಾಧ್ಯವಾಗುತ್ತದೆ. ಅದು ಸಮುದಾಯದ ಶಾಂತಿಗೆ ನಾಂದಿ ಹಾಡುವ ರೀತಿ.

ಇಂತಹ ಆಲೋಚನೆಯನ್ನು ಜಾರಿಗೆ ತಂದ ಶರಣ ಸಿದ್ಧಾಂತದಲ್ಲಿ ವಿಶ್ವಶಾಂತಿಗೆ ಇಂಬುಗೊಡುವ ಸರ್ವಧರ್ಮ ಸಮನ್ವಯದ ಪೋಷಕ ಬೀಜಮಂತ್ರವಿದೆ.

ಬೇಂದ್ರೆಯವರು 'ಪ್ರಸಾದಿಯ ಶಿವಲಿಂಗಸ್ಥಲಕ್ಕೂ, ಪ್ರಾಣಲಿಂಗಿಯ ಜಂಗಮಲಿಂಗ ಸ್ಥಲಕ್ಕೂ ಮಧ್ಯೆ ಉದ್ಭವಿಸುವ ಒಲವು ಲಿಂಗವು ನನಗೆ ತಕ್ಕಮಟ್ಟಿಗೆ ವಿರಾಮಸ್ಥಾನವಾಗಿ ಎಂದಿನಿಂದಲೂ ತೋರಿದೆ. ಅದು ಜೀವಾತ್ಮ ಅಂತರಾತ್ಮ, ಪರಮಾತ್ಮ ವಿವೇಕೋದಯ ಸ್ಥಲವಾಗಿದೆ... ಜೀವಾತ್ಮ ಅಂತರಾತ್ಮ, ಪರಮಾತ್ಮ ಸಾಮರಸ್ಯದ ಒಲವು ಲಿಂಗ ಈ ಹದದ, ಮುದದ ಭೂಮಿ, ಅನುಭಾವ ವಚನಗಳ ಧ್ವನಿಯೂ ಇದೇ ಬಗೆಯದಾಗಿದೆ ಎಂದು ನನ್ನ ಪ್ರತ್ಯಯಕ್ಕೆ ಸ್ಪರ್ಶವಾಗಿದೆ,'[6] ಎಂದು ತಿಳಿಸಿದ್ದಾರೆ.

ಮನೋವಿಜ್ಞಾನಿ ಎರಿಕ್ ಫ್ರಾಂ 'ಮಾನವ ಅಸ್ತಿತ್ವದ ಪ್ರಶ್ನೆಗಳಿಗೆ ಪ್ರೀತಿಯೊಂದೇ ವಿವೇಕದ ಉತ್ತರ' ಎಂದು ಹೇಳಿದ್ದಾನೆ. ನಮ್ಮ ಇಂದಿನ ಸಕಲ ಸಮಸ್ಯೆಗಳಿಗೆ ಪರಿಪೂರ್ಣವಾದ ಔಷಧ ಒಲವು. ಅದೇ ಬೇಂದ್ರೆಯವರ 'ಒಲವು ಲಿಂಗ'. 'ಒಲವು ಲಿಂಗ'ದ ಅರಿವು ಶಾಂತಿ, ಸಮಾಧಾನ, ನಿಷ್ಠೆ ತರುತ್ತದೆ. ಮನುಷ್ಯ ಮನುಷ್ಯರ ನಡುವೆ ಇರಬೇಕಾದ ಪ್ರೀತಿಯನ್ನು 'ಒಲವು ಲಿಂಗ' ಎಂಬ ಪ್ರತಿಮೆಯ ಮೂಲಕ ಬೇಂದ್ರೆ ಅಭಿವ್ಯಕ್ತಿಸಿದ್ದಾರೆ.

ಕುಲ, ಶೀಲ, ಧನ, ರೂಪ, ಯೌವನ, ವಿದ್ಯೆ, ತಪಸ್ಸು, ರಾಜ್ಯ ಇವು ಅಷ್ಟಮದಗಳು.

'ವೀರಶೈವ ಮಾರ್ಗಾಚರಣೆಯಲ್ಲಿ ಅವಿದ್ಯಾಪರಿಹಾರಕವಾದ ಗುರು, ಲಿಂಗ, ಜಂಗಮ, ಪಾದೋದಕ, ಪ್ರಸಾದ, ವಿಭೂತಿ, ರುದ್ರಾಕ್ಷಿ, ಮಂತ್ರ ಈ ಎಂಟು ವಸ್ತುಗಳಿಗೆ ಅಷ್ಟಾವರಣ ಎನ್ನುವರು'[7]

'ಅಷ್ಟಮದವಳಿದು ಅಷ್ಟಾವರಣ ಧರಿಸಿಪ್ಪ ಮಹಾಗಣಂಗಳು ಲಯವಿಲ್ಲದೆ ರಾಜಯೋಗ ಪಡೆದಿಹರು' ಎಂದು ಸಿದ್ಧರಾಮಹೇಳುವನು.[8]

ಈ ಅಷ್ಟಾವರಣವೆಂಬ ಅಷ್ಟಕೋನಗಳಿಂದ ಅವಿದ್ಯೆಯನ್ನು ಪರಿಹರಿಸಿಕೊಂಡು ಶರಣನು ಇಷ್ಟಲಿಂಗ ಧ್ಯಾನಿಯಾಗಬೇಕೆಂಬ ಚಿಂತನೆಯನ್ನು ಬೇಂದ್ರೆ ನೀಡಿದ್ದಾರೆ. ಶರಣ ಚಿಂತನೆಯ ರಸಗಂಗೆಯಾಗಿ ಹರಿದ ಅವರ ಕಾವ್ಯ ಶಿವಭಕ್ತರ ಅಂತರಂಗದ ಆಹ್ಲಾದವಾಗಿದೆ.

ಇಷ್ಟಲಿಂಗವು ಶರಣನ ಪ್ರಾಣದ ಬೆಸುಗೆಯಾಗಿ, ತನ್ನ ಅಹಂ ಅನ್ನು ಇಲ್ಲವಾಗಿಸಿಕೊಂಡು ಪ್ರಕೃತಿಯ ಬೆಳಕಿನಲ್ಲಿ ಒಂದಾಗುವ ಅರಿವು ಎಂದು ಬೇಂದ್ರೆ ತಮ್ಮ ಕಾವ್ಯದಲ್ಲಿ ಪ್ರಕಾಶಿಸಿದ್ದಾರೆ.

ಅಷ್ಟಕೋನ ಘನ ಇಷ್ಟಲಿಂಗ, ಪ್ರಾಣಕ್ಕು ಭಾವ ಬೆಸುಗೆ
ಹನಿಹನಿದು ಬಾರ, ಘನರಸದ ಗಂಗೆ ನನ್ನೊಸಗೆ ನಿನ್ನ ಹಸುಗೆ
ಬಿಂದು ಬಿಂದು ಬ್ರಹ್ಮಾಂಡ ಸಿಂಧು ನೀ ನನ್ನ ದೃಷ್ಟಿಕೇಂದ್ರ.
'ಇದಂ'ನಲ್ಲಿ ಮುಳುಗಿತ್ತು ಹಮ್ಮು ಬಾನೆಲ್ಲ ಚಂದ್ರ – ಇಂದ್ರ.

ಆಕಾಶವೆಲ್ಲ ಅವಕಾಶವಾಗಿ ನಕ್ಷತ್ರರಾಶಿರಾಶಿ
ಆ ಲಕ್ಷಲಿಂಗ ನಾಕೊರೆಯಬೇಕೆ? ನಿಂತಲ್ಲೆ ವಾರಣಾಶಿ
ಮೂರು ಲೋಕಗಳ ಹೊಲಿದಗಂಗೆ ನನ್ನುಸಿರ ಅಂತರಂಗ
ಅಂದು ಇಂದು ಮುಂದೊಂದೆ ಜ್ಯೋತಿ ಉದ್ಭವಿಸಿತೀಗಭಂಗ
(ಬುದ್ಧಲಿಂಗ : ಯಕ್ಷಯಕ್ಷಿ)

## ತುಂಬಿ ಬಂದಿತ್ತು

ಬೇಂದ್ರೆಯವರ 'ಭಾವಗೀತೆ'ಯ ತುಂಬಿ ಅವರ ನಾದದ ಗುಂಗಿನ, ಕಾವ್ಯ ಸೃಷ್ಟಿಯ ಗಾರುಡಿತನದ, ಮಧುಸಂಗ್ರಹದ ಮಧುವಾಗಿ ತನ್ನೆಲ್ಲ ಸತ್ತ್ವವನ್ನು ಇತರರಿಗೆ ನೀಡುವುದರ ಸಂಕೇತ. ಆ 'ಭಾವಗೀತೆ'ಯು 'ಓಂಕಾರದ ಶಂಖನಾದಕ್ಕಿಂತ ಕಿಂಚಿದೂನ'

"ಭೃಂಗದ ಬೆನ್ನೇರಿ ಬಂತು ಕಲ್ಪನಾವಿಲಾಸ"
ಮಸೆದಗಾಳಿ ಪಕ್ಕ ಪಡೆಯುತಿತ್ತು ಸಹಜ ಪ್ರಾಸಾ
ಮಿಂಚಿ ಮಾಯವಾಗುತಿತ್ತು ಒಂದು ಮಂದ ಹಾಸಾ

ಭೃಂಗದ ಬೆನ್ನೇರಿ ಬಂತು.....

ಏನು ಏನು? ಜೇನು ಜೇನು? ಎನೆ ಗುಂಗುಂಗಾನಾ
ಓಂಕಾರದ ಶಂಖನಾದಕಿಂತ ಕಿಂಚಿದೂನಾ
ಕವಿಯ ಏಕತಾನ ಕವನದಂತೆ ನಾದಲೀನಾ
ಭೃಂಗದ ಬೆನ್ನೇರಿ ಬಂತು.....
(ಭಾವಗೀತೆ : ನಾದಲೀಲೆ)

ಈ ಭೃಂಗರೂಪಕವು ಹಲವು ಬಗೆಯಲ್ಲಿ ಬೇಂದ್ರೆ ಭಾವಲೋಕವನ್ನು ಆವರಿಸಿದೆ. ಬಸವಣ್ಣನವರ 'ವಚನದಲ್ಲಿ ನಾಮಾಮೃತ ತುಂಬಿ' ಯಲ್ಲಿಯ 'ತುಂಬಿ'ಯು ಬೇಂದ್ರೆಯವರ ಕಾವ್ಯದ ತುಂಬ ಹರಿದಾಡಿದೆ.

ಬಸವಾದಿ ಶರಣರು ಕನ್ನಡನಾಡಿನಲ್ಲಿ ಮಿಂಚಿನಂತೆ ಹರಿದಾಡಿ ಮಧುರಭಾವದ ಮಧುರ ಜೀವನವನ್ನು ಸಕಲ ಜನರಲ್ಲಿ ತುಂಬಿಹೋದ ಕಾಲವನ್ನು ಬೇಂದ್ರೆಯವರು 'ತುಂಬಿ ಬಂದಿತ್ತು' ಎಂಬ ರೂಪಕಾತ್ಮಕ ಕವನದಲ್ಲಿ (ಸಖಿಗೀತ) ಹಿಡಿದಿಟ್ಟಿದ್ದಾರೆ. ಕವನದ ಭಾವ ಸಂದರ್ಭ ಹೀಗಿದೆ: 'ಈ ಹಾಡು ಬಸವಣ್ಣನವರ ಜೀವನದ ಕೊನೆಯ ದಿನಗಳಿಗೆ ಸಂಬಂಧಿಸಿದ 'ತಲೆದಂಡ' ಎಂಬ ನಾಟಕದೊಳಗಿನದು. ರಾಯ ಮುರಾರಿಯ ಕಣ್ಣಿದಿರು ಬಸವಣ್ಣನವರ ಸಮಾಧಿಯ ಕೆಲಸ ನಡೆದಿರುವಾಗ ಮುದುಕ ಜಂಗಮನೊಬ್ಬನು ತನ್ನ ಸ್ವಾನುಭವದ ಈ ಹಾಡನ್ನು ಹೇಳುತ್ತಿರುವನು ರಾಯಮುರಾರಿಗೆ. ಅದು ಬಿಜ್ಜಳ ಬಸವಣ್ಣನವರ ಚರಿತ್ರೆಗೂ ಕಾಲಕ್ಕೂ ಅನ್ವಯಿಸುವುದೆಂದು ತೋರುವುದು. 'ತಲೆದಂಡ'ದ ಕೊನೆಯ ಪದ್ಯವೇ ಇದು.'[9]

ಶರಣರ ಸಮತಾತತ್ತ್ವದ, ಮಾನವಕುಲ ಒಂದೆಂಬ ಚಿಂತನೆಯ ಸಾಮಾಜಿಕ ಕ್ರಾಂತಿ ಶಾಂತಿಯಿಂದ ಆವರಿಸಿದ ಕಾಲವನ್ನು 'ಬೆಳಕು'. 'ಗಾಳಿ', 'ನೀರು'ಗಳ ಪ್ರತಿಮೆಯಲ್ಲಿ ಬೇಂದ್ರೆಯವರು ಚಿತ್ರಿಸಿರುವ ರೀತಿ ಅನನ್ಯವಾಗಿದೆ. ಇವುಗಳು ಎಲ್ಲ ಮನುಜರ ಪೋಷಕ ಪ್ರಕೃತಿ ಚೈತನ್ಯಗಳು. ಆದರೆ ಮನುಷ್ಯ ಜಾತಿ, ಮತ, ಪಂಥ, ವರ್ಗದ ಅಹಂನಲ್ಲಿ ಪ್ರತ್ಯೇಕಗೊಂಡಿದ್ದಾನೆ. ಅದನ್ನು ಒಡೆದು ಹಾಕುವ ಶರಣ ಚಿಂತನೆಯ ವಚನ ಚಳುವಳಿ ಕನ್ನಡನಾಡಿನಲ್ಲಿ ಹರಿದಾಡಿದಾಗ ಶೋಷಣೆಗೆ ಒಳಗಾಗಿ ಅಸಮಾನತೆಯ ದಳ್ಳುರಿಯಲ್ಲಿ ಬೇಯುತ್ತಿದ್ದ ದಲಿತರಿಗೆ, ಬಡವರಿಗೆ, ಅಸಹಾಯ ನಿರ್ಗತಿಕರಿಗೆ ಅದು ಬಿಡುಗಡೆಯ ಬೆಳಕಾಯಿತು. ಆ ಬೆಳಕಿನಲ್ಲಿ ಅವರು ಮಿಂದರು. ಆ ಜೀವ ಚೈತನ್ಯದ ಗಾಳಿಯಲ್ಲಿ ಉಸಿರಾಡಿ ಆಹ್ಲಾದಗೊಂಡರು. ಆ ಪ್ರಾಣ ಪೋಷಕ ಗಂಗೆಯನ್ನು ಸವಿದು ಅದರಲ್ಲಿಮಿಂದು ಜೀವನದ ಉಲ್ಲಾಸ ಉಂಡರು. ಆ ಆನಂದಲಹರಿ ಈ ಕವನದ ಮೊದಲ ನುಡಿ:

ತುಮ್ ತುಮ್ ತುಮ್ ತುಮ್ ತುಮ್ ತುಮ್ ತುಮ್ ತುಮ್
ತುಂಬಿ ಬಂದಿತ್ತs ತಂಗೀ
ತುಂಬಿ ಬಂದಿತ್ತು. ॥ಪಲ್ಲ॥

ಬೆಳಕಿಗಿಂತ ಬೆಳ್ಳಗೆ ಇತ್ತ
ಗಾಳಿಗಿಂತ ತೆಳ್ಳಗೆ ಇತ್ತ
ಜಡಿಯಿಂದಿಳಿದ ಗಂಗಿ ಹಾಂಗ
ಚೆಂಗನೆ ನೆಗೆದಿತ್ತ.

ಮೈಯೊಳಗಿರುವ ಮೂಲಿ ಮೂಲಿಗೂ
ಮೂಡಿ ಬಂದಿತ್ತ.

ಅಡಿಮುಡಿಗೂಡಿ ನಡುವಂತೆಲ್ಲಾ
ಮುಳುಗಿಸಿ ಬಿಟ್ಟಿತ್ತs ತಂಗೀ
ತುಂಬಿ ಬಂದಿತ್ತು । ತುಮ್ ತುಮ್ .....

ಬಸವ ಅಲ್ಲಮಾದಿ ಶರಣರು ವಚನ ಚಳುವಳಿಯ ಮೂಲಕ ತಳಸಮುದಾಯವನ್ನು ಜಾಗೃತಗೊಳಿಸಿ, ಅವರ ಮೇಲ್ಚಲನೆಗೆ ಕಾರಣರಾದರು. ಅವರಿಗೆ ಅನುಭವ ಮಂಟಪದಲ್ಲಿ ಸಮಾನ ನೆಲೆಯಲ್ಲಿ ಮುಕ್ತ ಸಂವಾದಕ್ಕೆ ಅವಕಾಶ ನೀಡಿದರು. ಅದನ್ನು ಬೇಂದ್ರೆಯವರು ಎರಡನೆಯ ನುಡಿಯಲ್ಲಿ ಹೂ ಕಂಪು, ಹಾಡಿನ ಇಂಪು ಪ್ರತಿಮೆಯಲ್ಲಿ ವರ್ಣಿಸಿ, ಆ ದೀನದಲಿತರಿಗೆ ಅದು ಜೀವದ ಮಾತಾಗಿ ಎದೆಯಲ್ಲಿ ನಟ್ಟಿತು ಎಂದಿದ್ದಾರೆ. ತುಳಿತಕ್ಕೊಳಗಾಗಿ ಅಂದಿನವರೆಗೆ ನಿರ್ಲಕ್ಷಿತರಾಗಿದ್ದ ಜನ ಆ ಹಿರಿಯರ ಶರಣ ಚಿಂತನೆಯ ಬೆಳಕಿನಲ್ಲಿ ತಾವು ವಚನ ರಚಿಸಿದರು. ತಮ್ಮ ವ್ಯಕ್ತಿತ್ವ ವಿಕಸನಗೊಂಡದ್ದಕಂಡು ಪುಲಕಿತರಾದರು. ಮಧುರಭಾವದಲ್ಲಿ ಮಿಂದರು. ಅವರ ಆ ಆತ್ಮಾನಂದವನ್ನು ಬೇಂದ್ರೆಯವರು 'ಬೆಳಕಿಗೆ ಮರಳಿ ಕಮಲವರಳಿ ಜೇನ ಬಿಟ್ಟಿತ್ತ' ಎಂಬ ರೂಪಕದಲ್ಲಿ ಬಣ್ಣಿಸಿದ್ದಾರೆ.

ಹೂವಿಗಿರುವ ಕಂಪು ಇತ್ತ
ಹಾಡಿಗಿರುವ ಇಂಪು ಇತ್ತ
ಜೀವದ ಮಾತು ಕಟ್ಟಿಧಾಂಗ
ಎದ್ಯಾಗ ನಟ್ಟಿತ್ತ.

ಮರ್ಮದ ಮಾತು ಆಡಿದ್ಹಾಂಗ
ಮರ್ಮಕ ಮುಟ್ಟಿತ್ತ.
ಬೆಳಕಿಗೆ ಮರಳಿ ಕಮಲವರಳಿ
ಜೇನ ಬಿಟ್ಟಿತ್ತs ತಂಗೀ
ತುಂಬಿ ಬಂದಿತ್ತು ॥ ತುಮ್ ತುಮ್......

ಯಾವ ಕಾಲದಲ್ಲಿಯೂ ಪಟ್ಟಭದ್ರ ಹಿತಾಸಕ್ತರಿಗೆ, ಪುರೋಹಿತಶಾಹಿಗೆ ಸರ್ವ ಸಮಾನತೆ, ಸಕಲ ಜನರ ಜಾಗೃತಿ, ಎಲ್ಲರ ಉದ್ಧಾರ ಅಸಹನೀಯವಾಗಿರುತ್ತದೆ. ಅವರ ಕುತಂತ್ರ ಮೇಲುಗೈಯಾಗಿ ಎಲ್ಲ ಕ್ರಾಂತಿಯನ್ನು ನಾಶಮಾಡುತ್ತದೆ. ಅಂತಹ ಷಡ್ಯಂತ್ರಕ್ಕೆ ಬಲಿಯಾದ ವಚನ ಚಳುವಳಿ ಬಸವಾದಿ ಶರಣರ ಕಾಲದಲ್ಲಿಯೆ 'ತುಂಬಿ'ಯ ಬಾಳಿನಂತೆ ಇಲ್ಲವಾಗಿ ಹೋಯಿತು. ಅದನ್ನು 'ಹದ್ದು ಬಂದು ಹಾವಿನ ಮೇಲೆ ಎರಗಿದಂತಿತ್ತು' ಎಂಬ ಉಪಮಾನದಲ್ಲಿ ಚಿತ್ರಿಸುತ್ತ ಬೇಂದ್ರೆಯವರು ಆ ಶರಣರ ಬೆಳಕು ಗಾಢ ಕತ್ತಲೆಯಲ್ಲಿ ಕರಗಿ ಹೋಯಿತು ಎಂದು ಹೇಳಿ ನೊಂದುಕೊಂಡಿದ್ದಾರೆ. ಆದರೂ ಕವಿ ಆಶಾವಾದಿಯಾಗಿ ಅದು 'ತುಂಬಿ ನಿಂತಿತ್ತs ಈಗ ತುಳುಕಿ ಹೋಗಿತ್ತ' ಎಂದು ತಿಳಿಸಿದ್ದಾರೆ. ಹಾಗೆ ತುಳುಕಿದ್ದು 800 ವರ್ಷಗಳ ನಂತರ 20ನೇ ಶತಮಾನದಲ್ಲಿ ಈಗ ಅಂತರ್ಜಲದಂತೆ ಮತ್ತೆ ಮರುಜೀವ

ಪಡೆದಿದೆ. ಇದು ವರಕವಿ ಬೇಂದ್ರೆ ಶರಣಕಾಲವನ್ನು ಹಿಡಿದಿಟ್ಟ ಅದ್ವಿತೀಯ ಕವನ. ಅದರ ಮೂರನೆ ನುಡಿ :

ಕಾಲದ್ವಾಂಗ ಕಪ್ಪಗಿತ್ತ
ಸಾವಿನ್ಹಾಂಗ ತೆಪ್ಪಗಿತ್ತ
ಹದ್ದು ಬಂದು ಹಾವಿನ ಮ್ಯಾಲೆ
ಎರಗಿದಂತಿತ್ತ.

ಇರಳು ಮಬ್ಬಿನ್ಯಾಗ ಹಗಲಿನ ಬೆಳಕು
ಕರಗಿ ದಂತಿತ್ತ.
ಗುಂಗು ಹಿಡಿದು ತಂಗಿದಾಗ
ತುಂಬಿ ನಿಂತಿತ್ತಈಗ
ತುಳಿಕಿಹೋಗಿತ್ತ.

ತಂಗಿ ತುಂಬಿ ಬಂದಿತ್ತು ॥ ತುಮ್ ತುಮ್....

## ಕರ್ನಾಟಕವ ಇತಿಹಾಸ ಪುರುಷರು

### ಬಸವಣ್ಣ

'ಬಸವಣ್ಣ, ಜಗದ್ವಿಲಕ್ಷಣ ಮೂರ್ತಿ. ಕರ್ನಾಟಕದ ಇತಿಹಾಸದಲ್ಲಿ ಇವನಂಥವ, ಇವನೊಬ್ಬನೆ,..... ಬಸವಣ್ಣನ ಜೀವನವೇ ಸಾಹಿತ್ಯ, ಸಾಹಿತ್ಯವೇ ಜೀವನ... ಬಸವಣ್ಣನವರ ವಚನಗಳನ್ನು ಅದರ ಹಿನ್ನಲೆಯಲ್ಲಿಯೇ ಮಥನ ಮಾಡಿಕೊಂಡು ಅರಿತುಕೊಳ್ಳಬೇಕಾದರೆ ಅದರ ಬೆಂಕಿ ಕಾವು ಎಷ್ಟು? ಅದರ ಬೆಳಕು ತಂಪು ಎಷ್ಟು? ಎಂದು ವಿವೇಕ ಮಾಡಬೇಕು. ಆನಂದದ ಅರಿವು ಹುಟ್ಟಬೇಕು.[10] 'ಬಸವಣ್ಣನ ವಚನಗಳಲ್ಲಿ ಬಸವನಭಕ್ತಿ, ಜೀವನದ ಸ್ಪಂದನದ ಛಂದೋಗತಿಯೇ ಅನುಭವಕ್ಕೆ ಬರುವದು. ಆ ಸರಸ ಸಜ್ಜನಿಕೆ, ಆ ಅನುಕಂಪಾಮೃದುಹೃದಯ, ವಿನಯವ ತೊರೆಯದ ಅಭಯ, ಜೀವದುಸಿರೆ ಸಾಹಿತ್ಯದ ಹೆಸರಿನಲ್ಲಿ ಹೃದಯಂಗಮ ವಾಗುವುದು,'[11] ಎಂದು ಬೇಂದ್ರೆಯವರು ಬಸವಣ್ಣನನ್ನು ನೆನೆದಿದ್ದಾರೆ.

ವೇದ ಉಪನಿಷತ್ತುಗಳ ಸಾರ ತಿಳಿದು, ಎಲ್ಲ ಮಾನವರೂ ಒಂದೇ ಎಂಬ ತತ್ವವನ್ನು ಅನುಷ್ಠಾನಗೊಳಿಸಲು, ಸಾಮಾಜಿಕ ಕ್ರಾಂತಿಯನ್ನುಂಟು ಮಾಡಿದವರು ಬಸವಣ್ಣ. ಕಾಯಕತತ್ವದಿಂದ ದಾರ್ಶನಿಕತ್ವದತ್ತ ಸಾಗುವ ಶ್ರೀಸಾಮಾನ್ಯ ಪಡೆ ನಿರ್ಮಿಸಿದವರು ಬಸವಣ್ಣ. ಅಂತಹ ಕ್ರಾಂತಿಕಾರಿಯು ಬೇಂದ್ರೆಯವರಿಗೆ ಮಹಾತ್ಮ ಆಗಿದ್ದಾರೆ. ಅವರು 'ಮಹಾತ್ಮ ಬಸವಣ್ಣನವರ ಜೀವನ ಮನನದಿಂದ' ಎಂದು ಹೇಳಿ 'ವೃಷಘೋರೋರವೀತಿ' ಕವನ ರಚಿಸಿದ್ದಾರೆ. ಭೂತದಯೆಯ ಸಾಕ್ಷಾತ್ಕಾರದಲ್ಲಿ ಮಿಂದ ಬಸವಣ್ಣ ಸಮಾನತೆಯ ಹರಿಕಾರ ಎಂಬುದನ್ನು ಬೇಂದ್ರೆ ಆ ಕವನದಲ್ಲಿ ಸಾರಿದ್ದಾರೆ.

ಸರ್ವಭೂತದಯೆ ಕಂಡಣ್ಣನಿಗೆ
ಹಾರುವನಾರೋ? ಹೊಲೆಯಾರೋ?
ಏಳುವ ಎಂಟುವ ಏರುವ ಹತ್ತುವ
ಅಮೃತ ರುದ್ರನಿಗೆ ಹದಿನಾರೋ!

ಹದಿನೇಳರ ನೆಲೆ ಕ್ಷೇತ್ರಜ್ಞನ ಬೆಲೆ
ಆತ ನಾಕೆಯಲಿ ನೆಲೆಸುತಿದೆ
ಮಾತಿನ ಮಥನಾ ಶ್ರೀಮನ್ಮಥನಾ
ಹೃದಯಾನಂದವು ಮೊಲೆಸುತಿದೆ. (ವೃಷಭೋರೋರವೀತಿ: ಶ್ರೀಮಾತಾ)

ಬೇಂದ್ರೆಯವರು 1922ರ ಪೂರ್ವದಲ್ಲಿ ಬಸವಣ್ಣವರ ಜೀವನವನ್ನು ಕುರಿತು ಒಂದು ಖಂಡಕಾವ್ಯ ಬರೆಯಲು ನಿರ್ಧರಿಸಿದ್ದರು. ಬಸವಣ್ಣ ಈ ನಾಡಿನ ಕಣಕಣದಲ್ಲಿ, ಬೆಳಕಿನಲ್ಲಿ, ಜನರಲ್ಲಿ ಒಂದಾಗಿ ಸದಾ ಇರುವರೆಂಬ ಭಾವದಲ್ಲಿ ಬೇಂದ್ರೆಯವರು ವಾರ್ಧಕ ಷಟ್ಪದಿಯಲ್ಲಿ ಬರೆದ ಪ್ರಾರಂಭದ ನುಡಿ ಹೀಗಿದೆ :

ಯಾರ ವಚನದ ಗಾಲಿಗೆದ್ದ ಹಾದಿಯ ಹುಡಿಯು
ಏರಿ ಗಗನಾಂಗಣದೊಳಾತು ಬೆಳಕಿನ ಕುಡಿಯು
ಯಾರ ಸಂಗವ ಪಡೆದು ಅಂಗವೂ ಜಂಗಮವು ಲಿಂಗಮಯ
ಲೀಲೆಯಾಯ್ತು
ಯಾರ ಬಾಯುಸುರಿನಿಂದಖಿಲ ಕರ್ನಾಟಕವು
ವೀರ ವೃತ್ತಿಯ ತಳೆದ ಧೀರ ಧರ್ಮಿಗಳಂತೆ
ಮೀರಿರುವ ಭಕ್ತಿಯಲಿಹುದೆನ್ನುವರಾರು, ಆ ಬಸವ
ಬಯಲಾದನೆಂದು?

(ಬಸವ ಬಯಲಾದ : ಶತಮಾನ)

## ಅಲ್ಲಮ ಪ್ರಭು

ಬಸವಕಲ್ಯಾಣದ ಅನುಭವ ಮಂಟಪದ ಪೀಠಾಧ್ಯಕ್ಷ ಅಲ್ಲಮಪ್ರಭು. ಕನ್ನಡ ನಾಡಿನ ಕಾವ್ಯ ಚರಿತ್ರೆಯಲ್ಲಿ ಕೃಷ್ಣ, ರಾಮ, ಭರತ, ದುರ್ಯೋಧನ, ಕರ್ಣ, ಅರ್ಜುನ, ಭೀಮ, ರಾವಣ ಕಥಾನಾಯಕರಾಗಿ ಪರಿಗಣಿತರಾಗಿ ಚಿತ್ರಿತವಾಗಿದ್ದಾರೆ. ಅವರ ಬಗ್ಗೆ ವಿಮರ್ಶಾಲೇಖನಗಳು ಹೇರಳವಾಗಿ ಬಂದಿವೆ. ಬೇಂದ್ರೆಯವರು 'ಕನ್ನಡ ಸಾಹಿತ್ಯದಲ್ಲಿ ನಾಲ್ಕು ನಾಯಕರತ್ನಗಳು' ಕೃತಿಯಲ್ಲಿ ರತ್ನಾಕರನ 'ಭರತೇಶ ವೈಭವ' ಕಾವ್ಯದ ನಾಯಕ ಭರತ, ಚಾಮರಸಕವಿಯ ಪ್ರಭುಲಿಂಗಲೀಲೆಯ ಕಾವ್ಯನಾಯಕ ಅಲ್ಲಮಪ್ರಭು; ಲಕ್ಷ್ಮೀಶನ ಜೈಮಿನಿ ಭಾರತದ ಕಾವ್ಯನಾಯಕ ಶ್ರೀಕೃಷ್ಣ ಮತ್ತು ಕುವೆಂಪು ಅವರ ಶ್ರೀರಾಮಾಯಣ ದರ್ಶನಂನ ರಾವಣನನ್ನು ವಿಮರ್ಶಿಸಿದ್ದಾರೆ. ಆ ಕೃತಿಯಲ್ಲಿ ಅವರು 'ನಾನು ಆರಿಸಿಕೊಂಡ ಭರತ, ಅಲ್ಲಮ,

ಕೃಷ್ಣ ಮತ್ತು ರಾವಣ ಈ ನಾಲ್ಕು ನಾಯಕರಲ್ಲಿ ಅಲ್ಲಮಪ್ರಭು ಐತಿಹಾಸಿಕ ವ್ಯಕ್ತಿ. ಉಳಿದವರು ಕಾದಂಬರಿಗಳಲ್ಲಿಯ ನಾಯಕರಂತಿದ್ದಾರೆ..... ವೀರಶೈವಧರ್ಮದಲ್ಲಿ 'ತತ್‌ತ್ವಂ ಅಸಿ'ಎಂಬ ತತ್ತ್ವವು ಮುಖ್ಯ. ಜೀವವು ಯಾವ ವಸ್ತುವಿನಿಂದ ಬಂದಿರುತ್ತದೋ ಪುನಃ ಅದೇ ವಸ್ತುವಾಗುತ್ತದೆ. ಅಲ್ಲಮನ ವಿಚಾರದಲ್ಲಿ ಲಿಂಗಾಂಗ ಸಾಮರಸ್ಯ ಮಹತ್ವ ಬರುತ್ತದೆ. ಭರತನು ಕ್ಷತ್ರಿಯ ರಾಜನಾಗಿ ಕ್ಷಾತ್ರ ಪೌರುಷದಿಂದ ತನ್ನ ದಿಗ್ವಿಜಯಕಾಲಕ್ಕೆ ಅನೇಕ ರಾಜರನ್ನು ಗೆದ್ದು ಬಂದರೆ, ಅಲ್ಲಮ ಪ್ರಭು ತನ್ನ ದಿಗ್ವಿಜಯದಲ್ಲಿ ಅನೇಕ ಭಕ್ತರನ್ನು ಮಾತೆಂಬ ಜ್ಯೋತಿಯಿಂದ ಗೆದ್ದಿದ್ದಾನೆ.(12) ಎಂದು ಹೇಳಿದ್ದಾರೆ.

ಬೇಂದ್ರೆಯವರ ಪ್ರಕಾರ 'ಪ್ರಭುವು ಆಳಲ್ಲ, ಅರಸು. ಅವನ ಪ್ರತಿಭಾಸೂರ್ಯನು ಉಳಿದ ಬೆಳಕುಗಳೊಡನೆ ನೆರಳು ಬಿಸಿಲಾಟವಾಡುವನು. ವಚನ ಋಷಿಗಳು ಕಂಡ ತೇಜವದು. ಋಷಿಯೂ ಭಕ್ತನಂತೆ ತೇಜೋಜೀವಿ ಆದರೆ ನೆಲೆ ಬೆಲೆ ಹತ್ತದ ಅಳವು ಅವನ ಶಬ್ದಕ್ಕಿರುವದು. ಅವನ ವಾಣಿ ಪ್ರಸ್ತುತವನ್ನಷ್ಟೆ ಬೆಳಗದು. ಅದು ಚಿರಂತನ ಬೆಳಕು'.(13)

ಬೇಂದ್ರೆಯವರ 'ಅಲ್ಲಮಪ್ರಭು' ಕವನವು ಅಷ್ಟಷಟ್ಪದಿಯ ರಚನೆಗೆ ಮತ್ತು ವ್ಯಕ್ತಿತ್ವ ಚಿತ್ರಣಕ್ಕೆ ಮಾದರಿಯಂತಿದೆ. ಬೇಂದ್ರೆಯವರು ಆತ್ಮತತ್ವದಲ್ಲಿ ಲೀನವಾದ ಅಲ್ಲಮ ಪ್ರಭುವನ್ನು ಮುಕ್ಕು ತುಕ್ಕಾಗದೆ ಮೈಕವಚ ಕಳೆದಿಟ್ಟು ಕದಳಿಯಲ್ಲಡಗಿದ ಎಂದು ಪ್ರತಿಮಾತ್ಮಕವಾಗಿ ಚಿತ್ರಿಸಿದ್ದಾರೆ. ಪರಮಾತ್ಮನ ಸ್ವರೂಪವನ್ನು ಶರಣರು ಬಯಲು, ಶೂನ್ಯವೆಂದು ಕರೆದಿದ್ದಾರೆ. ಆ ಶೂನ್ಯದ ಅರಿವು ಹುಣ್ಣಿಮೆ. ಅಲ್ಲಿ ಬೆಳುದಿಂಗಳವ ಕುಡಿದ ಮಧುಮತ್ತ ಚಿತ್ತ – ಅಲ್ಲಮ ಎಂದು ಬೇಂದ್ರೆ ಬಣ್ಣಿಸಿದ್ದಾರೆ. ಅವರ ಅಲ್ಲಮ ಅರಿವಿನ ಫಲ : "ಬೇರೆ ದರುಶನವೇಕೆ? ಮಾತೆ ಜ್ಯೋತಿರ್ಲಿಂಗ" ಆಗಿದೆ.

'ಪ್ರಭುದೇವ ಅಲ್ಲಮ' ಲೇಖನದಲ್ಲಿ ಬೇಂದ್ರೆಯವರು 'ಪ್ರಭುದೇವರ ಪ್ರತಿಯೊಂದು ಮಾತಿನಲ್ಲಿಯೂ ನಾವು ಜ್ಯೋತಿಯನ್ನು ಕಾಣಬಹುದು. ಜ್ಯೋತಿ ಎಂದರೆ ಮಾರ್ಗದರ್ಶಕ ಶಕ್ತಿ. ಇದು ವಿಜ್ಞಾನಮಾರ್ಗ!'(14) ಎಂದು ಸ್ಪಷ್ಟಪಡಿಸಿದ್ದಾರೆ.

'ಅಲ್ಲಮಪ್ರಭುದೇವರಲ್ಲಿಇದ್ದರಸ – ಲೌಕಿಕರಸವಲ್ಲ ಅದು ಅಲೌಕಿಕರಸ. ಅಲ್ಲಮಪ್ರಭುದೇವರೆಂದರೆ ರಸಪುರುಷ'(15) ಎಂದು ಹೇಳಿರುವ ಬೇಂದ್ರೆಯವರು, ಆ ರಸಪುರುಷನನ್ನು ತಮ್ಮ ಅನುಭಾವವಾಗಿಸಿಕೊಂಡ ಪರಿ ಇದು:

೧

ಅಲ್ಲಮನ ಮ್ಯಾಲೆ ಇರಿವಿ ಆಡೋದಿಲ್ಲಾ.

೨

ಬೆಲ್ಲಕ್ಕ್ಯಾಕ ಬ್ಯಾರೇ ಸವಿ?
ಭಕ್ತಗಿಲ್ಲಾ ಬ್ಯಾರೆ ಕಿವಿ.

೩

ಕನ್ನಡಿ, ನೆರಳ ಕಂಡಿಲ್ಲಾ
ಮೌನಾ, ಮಾತ ಉಂಡಿಲ್ಲಾ
ಅಖಂಡಕ್ಕ ತುಂಡಿಲ್ಲಾ.

೪

ಸೂಜಿ ಕಣ್ಣಿಗೆ ಯಾವಾಧಾರ ?
ಕತ್ತರಿಗಿಲ್ಲ ಹೊಲಿಯೋ ವ್ಯಾಪಾರಾ
ಭವ ಇದ್ದರs ಶಿವಾ – ಹರಾ
ಆವಿಗೆ ಉಣಸತದ ಆವಿನಕರಾ.

(ಬೆಲ್ಲಾ – ಇರಿವಿ : ಚತುರೋಕ್ತಿ ಮತ್ತು ಇತರಕವನಗಳು).

ಅಲ್ಲಮನ ವಚನಗಳ ಅಧ್ಯಯನವೆಂದರೆ ಬೆಲ್ಲವನ್ನು ಸವಿಯುತ್ತ ತಾನೇ ಸಿಹಿಯಾಗಿ ಹೋದಂತೆ. ಅದು ಅರಿವಿನ ವಿಸ್ತಾರದತ್ತ ಸಾಗುತ್ತ ಶಿವಾನುಭವ ಪಡೆವ ರೀತಿ. ಅದು ಬೇಂದ್ರೆಯವರ ತ್ರಿಪದಿಯಲ್ಲಿ ಹೀಗೆ ಪ್ರಕಟಗೊಂಡಿದೆ.

ಅಲ್ಲಮನೊಡನಾಟ ಬೆಲ್ಲ ತಾನಾದಂತೆ
ಬಲ್ಲವನ ಬಾಳು ಹರಿವ, ತಾ ಶಿವದ
ಎಲ್ಲೆ ತಿಳಿದಂತೆ ದತ್ತಜ್ಞ

(ದತ್ತಜ್ಞನ ವಚನಗಳು : ಪ್ರತಿಬಿಂಬಗಳು)

ಅಲ್ಲಮನ ವಚನಗಳ ಕುರಿತು ವಿಚಾರಶೀಲ ವಿಮರ್ಶಕರು ತಮ್ಮ ಅಭಿಪ್ರಾಯಗಳನ್ನು ವ್ಯಕ್ತಪಡಿಸುತ್ತಿದ್ದಾರೆ. ಆದರೂ ತಿಳಿದದ್ದೆಷ್ಟು ಎಂಬ ಪ್ರಶ್ನೆ ಹಾಗೆ ಉಳಿದಿದೆ. ಹಾಗಾಗಿ ಬೇಂದ್ರೆ ಹೇಳಿದ್ದಾರೆ : 'ಪ್ರಭುವು ಬಸವಣ್ಣನ ಪ್ರಾಣ ಲಿಂಗವಾಗಿ ಲೀಲೆ ತೋರಿದರೆ ಆ ಧೀರೋದಾತ್ತತೆ ಅಳೆಯುವ ಕೋಲನ್ನು ಸಾಹಿತ್ಯವಿಮರ್ಶೆ ಇನ್ನೂ ಸರಿಯಾಗಿ ಅಳವಡಿಸಿಕೊಂಡಿಲ್ಲ.'(16)

## ಅಕ್ಕ ಮಹಾದೇವಿ

'ವಚನಕ್ಕೆ ಬೆಲೆ ಬರುವುದು ನಡೆಯಿಂದ.' 'ಶರಣಸತಿ ಲಿಂಗಪತಿ' ಎಂಬ ವಚನದ ಮಹತಿ ಚಿರಸ್ಥಾಯಿಯಾಗಿ ಉಳಿಯಲು ಅಕ್ಕಮಹಾದೇವಿಯ ಜೀವನವೇ ಕಾರಣ'(17) ಎಂದು ಬೇಂದ್ರೆಯವರು ಹೇಳಿದ್ದಾರೆ. ಅವರು 'ಕದಳಿಗೆ ಪ್ರಶ್ನೆ' ಎಂಬ ಕವನದಲ್ಲಿ ಅಕ್ಕನು ಚೆನ್ನಮಲ್ಲಿಕಾರ್ಜುನನಿಗೆ ಒಲಿದ ಬಗೆ ಚಿತ್ರಿಸಿರುವ ರೀತಿ ಅನನ್ಯವಾಗಿದೆ.

'ಈ ಬಾಳೆ ಮುಡುಪಿಡುವೆ
ನಿನ್ನನೆ ಮೆಚ್ಚಿ

ಈ ಬಿಚ್ಚುಮೊಗ್ಗೆಯಲಿ
ಇಡಲೇನು ನಾ ಮುಚ್ಚಿ'

(ಕದಳಿಗೆ ಪ್ರಶ್ನೆ : ಇದು ನಭೋವಾಣಿ)

ಸಿದ್ಧರಾಮ

ಬೇಂದ್ರೆಯವರು ಸೊಲ್ಲಾಪುರದ ಡಿ.ಎ.ವಿ. ಕಾಲೇಜಿನಲ್ಲಿ ಕನ್ನಡ ಪ್ರೊಫೆಸರ್ ಆಗಿ 1944ರಿಂದ 1956ರವರೆಗೆ ಇದ್ದರು. ಸೊಲ್ಲಾಪುರಕ್ಕೆ ಹೋದ ವರ್ಷವೇ ಕೈಗೆ ಬಂದ ಹಿರಿಯಮಗ ರಾಮಚಂದ್ರನನ್ನು, ಚಿಕ್ಕಮಗು ಆನಂದನನ್ನು ಏಳುದಿನಗಳ ಅಂತರದಲ್ಲಿ ಕಳೆದುಕೊಂಡರು. ತೀವ್ರದುಃಖ ಅನುಭವಿಸಿದರು. ಶ್ರೀ ಅರವಿಂದ ಮತ್ತು ಶ್ರೀಮಾತೆಯವರ ಲೇಖನ, ಸಾವಿತ್ರಿ ಮಹಾಕಾವ್ಯ ಅಧ್ಯಯನ ಮಾಡುತ್ತ ಅಧ್ಯಾತ್ಮ ಜೀವಿಯಾಗಿ ಬಾಳಿದರು. 'ಸೊಲ್ಲಾಪುರದ ಸಿದ್ಧರಾಮೇಶ್ವರ ದೇವಾಲಯ ಮತ್ತು ಶುಭರಾಯರ ಮಠ ಬೇಂದ್ರೆಯವರ ಅಧ್ಯಾತ್ಮಿಕ ಸಾಧನೆಯಲ್ಲಿ ಪ್ರಮುಖ ಪಾತ್ರ ಪಡೆದವು.'[18] ಅವರು ಸಿದ್ಧರಾಮನ ಕಾಯಕತತ್ವ, ನಿರ್ಮಾಣ ಕ್ಷಮತೆ, ಹೆಣ್ಣು ಹೊನ್ನು ಮಣ್ಣುಗಳ ಆಸೆಯನ್ನು ಮೀರಿನಿಂತ ಸಿದ್ಧತನ, ಸಾಧನಾಮಾರ್ಗವನ್ನು ಕುರಿತು 'ಸಿದ್ಧರಾಮರ ವಚನವನ್ನು ನೆನೆದು' ಎಂಬ ಕವನ ರಚಿಸಿದರು.

ಇದ್ದು ಇಲ್ಲದ ಹಾಗೆ ಇರುವೆನೆಂಬಿರಿ ತಂದೆ
ಗದ್ದುಗೆಯನೇರುವದದೆಂದು ಹೇಳಿ?
ತಮ್ಮ ಹಿರಿಕೆರೆಯಲ್ಲಿ ಕಮಲವರಳುತ್ತಿಲ್ಲ
ಮತ್ತೆ ಕಾಣುವುದೆಂದು ಭಕ್ತ ಕೇಳಿ?

***

ಏಕತಾರಿಯ ಏಕನಾದದಿಂದದಿ ಮಿಡಿದು
ನುಡಿಯದಿರೆ ಹಗಲಿರುಳು ಪ್ರಾಣತಂತು
ನಿಮ್ಮ ಶರಣರ ಬಿಂಬ ಕಣ್ಣಿನಲಿ ಕಳೆಗೊಂಡು
ಮಿಂಚೀತು ಎದೆಯಲ್ಲಿ ತ್ರಿಶೂಲವೆಂತು ?

***

ಹೊನ್ನೆಂಬ ಹೆಣ್ಣೆಂಬ ಮಣ್ಣೆಂಬ ಮೆಟ್ಟಿಲವ
ಮೀರಿ ಕಟ್ಟಿದ ಪುರವು ಮೆರೆವುದೆಂದು?
ಎದೆಯಲ್ಲಿ ಸುಧೆಯಾಗಿ ನಿಮ್ಮ ವಚನಾಮೃತವು
ಕಣ್ಣಿಗಂಜನವಾಗಿ ತೆರೆವುದೆಂದು?

***

ಅಕ್ಕಗಳು ಅವ್ವಗಳು ವಚನ ರಚನೆಯ ಬಿಚ್ಚಿ
ನಾಲಿಗೆಯ ನೆಲಗಳಲಿ ಬಿತ್ತುತಿರಲು,

ಅಪ್ಪಗಳು ಅಯ್ಯಗಳು ಮೂಕರಾಗಿಹರೇಕೊ
ಕನ್ನಡದ ಗುಡಿ ಮತ್ತೆ ಎತ್ತುತಿರಲು !
(ಸಿದ್ದರಾಮರ ವಚನವನ್ನು ನೆನೆದು : ಗಂಗಾವತರಣ)

ಬೇಂದ್ರೆಯವರು ತಮ್ಮ ಹಿರಿಯಮಗ ರಾಮಚಂದ್ರನನ್ನು ಸಿದ್ಧರಾಮ ಎಂದು ಕರೆಯುತ್ತಿದ್ದರು. 'ಎದೆಯಹತ್ತಿರ ಹೆಗಲ ಎತ್ತರ ಬೆಂಬಲವಾಗುತ' ಇದ್ದ ಮಗ ತೀರಿ ಹೋದಾಗ ; ಚಿಕ್ಕಂದಿನಿಂದಲೂ ಆಪ್ತಬಂಧು, ಮಿತ್ರರ ಸಾವುಗಳನ್ನು ಕಂಡು ನೋವುಂಡ ಅವರು ಮನುಷ್ಯನ ಬದುಕಿನ ಅಶಾಶ್ವತೆಯನ್ನು ಕುರಿತು ಶರಣಭಾವದಲ್ಲಿ ಹೀಗೆ ಬಣ್ಣಿಸಿದ್ದಾರೆ.

'ದೀಪಗಳ ಬುಡದಲ್ಲೆ ಕತ್ತಲು ಅಡಗಿ ಕೊಂಡಿರುವಂದದಿ
ಜೀವ ಪುಷ್ಪದ ತೊಟ್ಟಿನಲ್ಲಿಯೆ ಸಾವು ಇರುವುದು ಚೆಂದದಿ'
(ಹಾಡುಪಾಡು)

## ಶರಣ ಬಾಂಧವ್ಯ

**ಮಧುರ ಚೆನ್ನ**

'1953ರಲ್ಲಿ ಆಗಸ್ಟ್ 15ರ ಸಂಜೆ ನನ್ನ ಗೆಳೆಯನ ಕುಣಿಯಲ್ಲಿಳಿದು, ಅವರ ಧರ್ಮಪತ್ನಿ – ಬಸವ್ವನವರ ಇಚ್ಛೆಯಂತೆ ಮೊದಲ ಹಿಡಿ ಮಣ್ಣು ಕೊಟ್ಟೆ, ಗೌರವದ ಮಾಲೆ ಹಾಕಿದೆ. ನನ್ನ ಜೀವನದಲ್ಲಿ ಕಠೋರ ಪ್ರಸಂಗಗಳು ಅನೇಕ ಬಂದು ಹೋಗಿವೆ. ನನ್ನ ಮಗನಿಗೆ, ಮಿತ್ರರಿಗೆ, ವಿದ್ಯಾರ್ಥಿಗಳಿಗೆ ಚಿತೆಗೇರಿಸಿದ್ದೇನೆ ನನ್ನ ಪಾಲಿನ ಸುಖ, ದುಃಖ ಕಂಡಿದ್ದೇನೆ, ಉಂಡಿದ್ದೇನೆ, ಅರ್ಪಿಸಿದ್ದೇನೆ. ನೆನಪಿಗೆ ಮರಣವಿಲ್ಲ. ಅದು ಅನುಭೂತಿಯ ಅಖಂಡಸಮಾಧಿ'[19] ಎಂದು ಬೇಂದ್ರೆಯವರು ಗೆಳೆಯ ಚೆನ್ನಮಲ್ಲಪ್ಪನ ಸಮಾಧಿ ನೆನೆದು ಹೇಳಿದ್ದಾರೆ. ಆ ಸಂದರ್ಭವನ್ನು ಗೆಳೆಯ ಸಿಂಪಿ ಲಿಂಗಣ್ಣನವರು ಹೀಗೆ ಸ್ಮರಿಸಿದ್ದಾರೆ :

'ಗೆಳೆಯನ ಗುಂಪಿನ ಅಧ್ವರ್ಯರು ನಿಜವಾದ ಗೆಳೆಯನ ಅಂತ್ಯದರ್ಶನಕ್ಕಾಗಿ ಕೈ ಮುಗಿದು ನಿಂತರು. ಕಂಠಬಿಗಿದು ಮಾತು ಕಟ್ಟಿದ್ದರಿಂದ ಗಂಭೀರವಾದ ಮೌನದಲ್ಲಿ ಮಹಾಕವಿಯು, ಕಾವ್ಯರ್ಷಿಯನ್ನು ಅದಾವ ಭಾವಭಾಷೆಯಲ್ಲಿಯೋ ಮಾತನಾಡಿ ಬೋಳ್ಕೊಟ್ಟರು. "ಅಲ್ಲಮಪ್ರಭುಗಳೇ, ನಿಮ್ಮ ಬಸವಣ್ಣನವರನ್ನು ಎಲ್ಲಿ ಬಿಟ್ಟಿರಿ?" ಎಂದ ಬಸಮ್ಮನವರ ಆಕ್ರೋಶವು ಅಲ್ಲಿ ನಿಂತವರನ್ನೆಲ್ಲ ಕರಗಿಸಿ ಬಿಟ್ಟಿತು.' [20]

'ಮೌನಲೀನ ಗೆಳೆಯ ಮಧುರಚೆನ್ನನನ್ನು ಕುರಿತು ಬರೆದದ್ದು' ಎಂಬ ಭಾವಸಂದರ್ಭ ಸೂಚಿಯ 'ಚೆನ್ನಲಿಂಗವೇ' (1924) ಕವನದ ಮೊದಲ ನುಡಿ ಹೀಗಿದೆ:

ಮಾತಾಡೋ ಮಾತಾಡೊ ಲಿಂಗವೇ । ನೀ ।
ಮಾತಾಡಲೊಲ್ಲೇಕೊ ಲಿಂಗವೇ ॥
ಮಾತಿನ ತಾಯಾದ ಮೌನದ ಬಸುರಲಿ
ಹೂತೆಯೋ ಹೇ ಚೆನ್ನಲಿಂಗವೇ ॥ಪಲ್ಲ॥ (ಸೂರ್ಯಪಾನ)

ಯೋಗಿ ಅರವಿಂದರು ಬ್ರಹ್ಮಸಮಾಧಿಸ್ಥರಾದಾಗ ಅವರನ್ನು ಕುರಿತು ರಚಿಸಿದ ಕವನ 'ಬೆಳಕಿನ ಲಿಂಗ'ದ ಮೊದಲ ನುಡಿ ಹೀಗಿದೆ:

ಮಾತಾಡೊ ಮಾತಾಡೊ ಲಿಂಗವೇ । ನೀ
ಮಾತಾಡಲೊಲ್ಲೇಕೊ ಲಿಂಗವೇ ?
ಮಾತಿನ ಬಸಿರಲ್ಲಿ ನೆಲೆಗೊಂಡ ಮೌನದಿ
ಹೂತಂಥ ಬೆಳಕಿನ ಲಿಂಗವೇ. (ಹೃದಯ ಸಮುದ್ರ)

ಈ ಎರಡೂ ಕವನಗಳ ಪಲ್ಲವಿಯ ಮೊದಲ ಎರಡು ಸಾಲುಗಳು ಒಂದೇ ಆಗಿವೆ. ಆದರೆ ಅನಂತರದ ಎರಡು ಸಾಲುಗಳಲ್ಲಿ ಮೌನದಲ್ಲಿ ಮಧುರಚೆನ್ನರು ಲೀನವಾಗಿದ್ದರೆ, ಬೆಳಕಿನಲ್ಲಿ ಬೆಳಕಾಗಿ ಹೋದ ಯೋಗಿ ಅರವಿಂದರು 'ಬೆಳಕಿನ ಲಿಂಗ'ವಾಗಿ ಕಂಪುಗೊಂಡಿದ್ದಾರೆ.

'ಗೆಳೆಯರಾದ ವಿನಾಯಕ ಗೋಕಾಕ, ಶಂಕರಗೌಡ ಪಾಟೀಲ, ಅಣ್ಣ ಮಾಸ್ತಿ ತಮ್ಮ ಪರಿಯಿಂದ ನನಗೆ ಬೆಂಬಲವಾಗಿದ್ದರೆ, ಚೆನ್ನಮಲ್ಲಪ್ಪನ ಒಡನಾಟ ಅಧ್ಯಾತ್ಮಿಕ ತಾತ್ವಿಕದಲ್ಲಿ ಬೇರೆ ಬಲವನ್ನು ನೀಡಿತು. ನಾನು ಪೂನಾದಲ್ಲಿದ್ದರೆ ಅಲ್ಲಿ ಬಂದ, ಸೊಲ್ಲಾಪುರಕ್ಕೆ ಬಂದ, ಧಾರವಾಡಕ್ಕೆ ಬಂದೇ ಬಂದ! ನಮ್ಮ ಶಿರಹಟ್ಟಿಗೆ ಕೂಡಿ ಹೋಗಿದ್ದೆವು. ಆಶ್ರಮಕ್ಕಂತೂ ಚೆನ್ನಮಲ್ಲಪ್ಪ – ಶಂಕರಗೌಡ ಇವರ ಸ್ನೇಹದ ಜೋಡೆಳೆ ಎಳೆಯಿತು. 'ಅಲ್ಲಿಗೆ ಹೋಗಿರಿ' ಎಂದವನಾನು; 'ಅಲ್ಲಿಗೆ ಬರ್ರಿ' ಎಂದವರು ಅವರು. ಎರಡೂ ಗುರು ಪ್ರಸಾದವೇ' ಎಂದು ತನ್ನ ಹಾಗೂ ಚೆನ್ನಮಲ್ಲಪ್ಪನ ಅಧ್ಯಾತ್ಮ ಸಾಧನಾನೇಹ ತಿಳಿಸುತ್ತ ಬೇಂದ್ರೆಯವರು 'ನಾನು ಸೊಲ್ಲಾಪುರದಲ್ಲಿ 1944–1956ವರೆಗೆ ಇದ್ದೆ; ಹನ್ನೆರಡು ಸಲವಾದರೂ ನಾನು ಹಲಸಂಗಿಗೆ ಹೋದೆ. ಚೆನ್ನಮಲ್ಲಪ್ಪ, ಅವನ ಬಳದವರು, ಮಕ್ಕಳು, ಸೊಸೆಯಂದಿರು, ಅವರ ಮನೆಯ ಜನ, ಮೊಮ್ಮಕ್ಕಳು – ಸೊಲ್ಲಾಪುರಕ್ಕೆ ಇಪ್ಪತ್ತು ಸಲ ತಂಗಿ ನಿಂತು ಬಂದರು ಹೋದರು. ಈ ನೇಯ್ಗೆ ನೇಯ್ದದ್ದು ದೈವಯೋಗ'[21] ಎಂದು ತಮ್ಮ ಬಾಂಧವ್ಯವನ್ನು ನೆನೆದಿದ್ದಾರೆ. ಇದು ಶರಣ ಮಾರ್ಗದಲ್ಲಿ, ಯೋಗಿ ಅರವಿಂದರ ಅಧ್ಯಾತ್ಮಾನುಭವದಲ್ಲಿ ನಡೆದು ಜಾತಿ ಮತರಹಿತವಾಗಿ ಬಾಳಿದ ಬೇಂದ್ರೆ ಜೀವನರೀತಿ.

'ಬಸವಣ್ಣನಂತೆ, ಚೆನ್ನಮಲ್ಲಪ್ಪನಂತೆ ಗಣಜೀವಿ, ಗಣಸಹಿತ ಕೈಲಾಸ ಕಾಣಬೇಕು. ಇಲ್ಲಿ ಕೈಲಾಸ ಪ್ರಸಾದವು ಗಣಕ್ಕೆಲ್ಲ ಮುಟ್ಟಬೇಕು. ಇದನ್ನು ಸಾಧನೆ ಮಾಡಿದ ಈ ಗೆಳೆಯ'[22] ಎಂದು ಬೇಂದ್ರೆ ಕೊಂಡಾಡಿದ್ದಾರೆ.

ಮಧುರಚೆನ್ನ(ಚೆನ್ನಮಲ್ಲಪ್ಪ ಗಲಗಲಿ ಅವರ ಕಾವ್ಯನಾಮ), ಪಿ. ಧೂಲ (ಕಾಶೀಮ ಸಾಹೇಬ), ಕಾಪಸೆ ರೇವಪ್ಪ ಮತ್ತು ಸಿಂಪಿ ಲಿಂಗಣ್ಣನವರು 1922ರಲ್ಲಿ ಸ್ಥಾಪಿಸಿದ ಹಲಸಂಗಿ ಗೆಳೆಯರ ಗುಂಪು; 1923ರಲ್ಲಿ ಧಾರವಾಡದಲ್ಲಿ ಸ್ಥಾಪಿತವಾದ ಬೇಂದ್ರೆಯವರ ಗೆಳೆಯರ ಗುಂಪು ಎರಡೂ ಸ್ನೇಹದಿಂದ ಇದ್ದವು.

ಬೇಂದ್ರೆ ಮತ್ತು ಮಧುರಚೆನ್ನರು ಶ್ರೀ ಅರವಿಂದರ ಅನುಯಾಯಿಗಳಾದರು. ಅವರಿಬ್ಬರ ಒಳಜೀವ ಸಂಬಂಧದ ಕವನ 'ಚೆನ್ನ'. ಆ ಕವನದ ವಿಶಾಲವೃಕ್ಷ ಅರವಿಂದರ ಸಂಕೇತವಾಗಿದ್ದು, ಆ ಗುರುವೆಂಬ ವಟವೃಕ್ಷವನ್ನು ತಾನು ಮತ್ತು ಮಧುರಚೆನ್ನ ಆಧರಿಸಿ ಕೂತಿರುವುದಾಗಿ ಬೇಂದ್ರೆ ಚಿತ್ರಿಸಿದ್ದಾರೆ. ಆ ಗುರುವಿನ ಪ್ರೇರಣೆಯಲ್ಲಿ ತಾವಿಬ್ಬರು ಸಾಗಿದರೂ – ಮಧುರಚೆನ್ನರದು ಅಧ್ಯಾತ್ಮ ಸಾಧನಾ ಪಥವಾದರೆ, ತನ್ನದು ಕಾವ್ಯ ಸಾಧನಾ ಪಥವಾಗಿತ್ತು ಎಂಬುದನ್ನು ಬೇಂದ್ರೆ ಹೀಗೆ ಬಣ್ಣಿಸಿದ್ದಾರೆ:

ನನ್ನ ನಿನ್ನ ಬೆನ್ನ ಬಳಿ ವಿಶಾಲವೃಕ್ಷ ಬೆಳೆದಿದೆ
ಮುಗಿಲ ತುಂಬಿ ಉಳಿದಿದೆ.
ಗಾಳಿಯಂತೆ ಸುಳಿದಿದೆ.
ನನ್ನ ನಿನ್ನ ನೋಟ ಮಾತ್ರ ಎರಡು ದಿಕ್ಕಿಗೆಳೆದಿದೆ
ಬೇರೆ ಹಾದಿ ತುಳಿದಿದೆ. ( ಚೆನ್ನ : ನಾದಲೀಲೆ)

ಬೇಂದ್ರೆಯವರು ಅದ್ದೂರಿ, ವೈಭವ ಅರ್ಥದ ಜನಪದರ ನುಡಿ 'ಹಂಪು' ಪದ ಬಳಸಿ ಮಧುರಚೆನ್ನರಿಗೆ ಪಟ್ಟಕಟ್ಟಲು ನೀರು ಎರೆದಿದ್ದಾರೆ. ಅದು ಅವರ ಆತ್ಮೀಯ ಭಾವದ ಮಧುರ ಅಭಿವ್ಯಕ್ತಿಯ 'ಪಂಪು'– ಕಾವ್ಯಗಾರುಡಿ, ಕಾವ್ಯವೈಭವ. (ಪಂಪು = ಇಂದ್ರಜಾಲ, ಗಾರುಡಿ, ವೈಭವ)

ವೈಭವಗೊಳಿಸುವ (ಹಂಪು ಗೊಳಿಸುವ) ವಿದ್ಯಾತೀರ್ಥವನ್ನು ತಂದು ಅದ್ದೂರಿಯಾಗು (ಹಂಪುಪಡೆ) ಯೆಂದು ತೀರ್ಥ ಎರೆಯುವ ಭಾವದಲ್ಲಿ ಬೇಂದ್ರೆ ಗೆಳೆತನದ ಅದ್ದೂರಿಯಿದೆ.

ಶರಣರು ಸದಾಗೆಲ್ಲುವ ಚೈತನ್ಯ ಹೊಂದಿರಬೇಕು. ಅವರ ನುಡಿಯಲ್ಲಿ 'ಸೋಲು' ಪದ ಹೊಮ್ಮಬಾರದು ಎಂಬುದು ಶರಣತತ್ವ, ಅದನ್ನು ಜಾಗೃತಗೊಳಿಸಿ ಕಾವ್ಯರಚಿಸಿದ ಬೇಂದ್ರೆ ನಮ್ಮ ಕಾಲದ ಶ್ರೇಷ್ಠ ಶರಣರು.

ಶರಣರು ಗುರು ಪಟ್ಟಪಡೆಯುವ ಕಿರಿಯರಿಗೆ 'ಪಟ್ಟದ ಮರಿ' ಎಂದು ಕರೆಯುವರು. ಬೇಂದ್ರೆಯವರಿಗೆ ಮಧುರಚೆನ್ನ 'ಪಟ್ಟದ ಮರಿ'. ಮಧುರಚೆನ್ನ ನಿಜಶರಣ ಮತ್ತು ಅಧ್ಯಾತ್ಮ ಸಾಧಕ. ಆತನನ್ನು 'ಪಡೆದಪ್ಪನಾಗು' ಎಂದು ಹರಸಿ ಬೇಂದ್ರೆ ಕಾವ್ಯರಚಿಸಿದ್ದಾರೆ.

ಎರೆಯುವೆನು ಬಾ ನಿನ್ನ, ನಮ್ಮ ಪಟ್ಟದ ಮರಿಯೆ
ಸಕಲ ತೀರ್ಥದ ಕ್ಷೀರ ನೀರ ತಂದು.

ಬೆರಗಾಗಿ ಬೆರೆತು ಆ ಶಿವನಲ್ಲಿ, ದೇವನಲಿ
ಪಡೆದಪ್ಪನಾಗು ಎಂದು.

***

ಕಲ್ಯಾಣದಧ್ಯಕ್ಷನಾದ ಪ್ರಭು ಅಲ್ಲಮನ
ಗುರುಪಾದ ತೀರ್ಥತಂದು
'ಕಲ್ಯಾಣ ಕಲ್ಯಾಣ' ಎರೆಯುವೆನು ಶಿರಬಾಗು
ಶಿವಶರಣನಾಗು ಎಂದು.

***

ಹಂಪುಗೊಳಿಸುವ ದೇವಿಯೊಲಿದ ಮಾಧವನ ವಿ
ದ್ಯಾತೀರ್ಥವನ್ನು ತಂದು
ಹಂಪು ಪಡೆಯೆಂದು ನಾ ಎರೆಯುವೆನು ನೀ ಸರ್ವ
ಸಂನ್ಯಾಸಿಯಾಗು ಎಂದು

***

'ಸೋಲು' ಎಂಬುದು ಕೇಳು ಮೃತ್ಯುಲೋಕದ ಸೊಲ್ಲು
'ಗೆಲುವು' ಒಂದೆ ಬಲ್ಲ ನಮ್ಮನಲ್ಲ.
'ಸೋಲು' ಹುಂಬರಗುಲ್ಲು 'ಗೆಲುವು' ಕಾಣ್ಬರ ಸೊಲ್ಲು
ಸೋಲುವವ ತಾನೆಂದು ಶರಣನಲ್ಲ. (ಹರಕೆ : ಸೂರ್ಯಪಾನ)

## ಸಿಂಪಿ ಲಿಂಗಣ್ಣ

ಸಿಂಪಿ ಲಿಂಗಣ್ಣ ಮತ್ತು ಬೇಂದ್ರೆಯವರ ನಡುವೆ ತುಂಬ ಪ್ರೀತಿಯ ಸಂಬಂಧವಿತ್ತು. ಬೇಂದ್ರೆಯವರು ಲಿಂಗಣ್ಣನವರ 'ಕನ್ನಡ ಕುಲದೀಪ ಬಸವಣ್ಣ' ಕೃತಿಗೆ ಮುನ್ನುಡಿ ಬರೆಯುತ್ತ ಆ ಕೃತಿಯಲ್ಲಿ ರಸೈಕ್ಯ ದೃಷ್ಟಿಕಂಡು 'ಇಲ್ಲಿ ಎಂಥ ಎತ್ತರನ್ನವರಿಗೂ ಸಿಲುಕದ ವಿಚಾರಗಳಿವೆ. ಎಂಥ ಕುಳ್ಳರಿಗೂ ಎಟಕುವ ವಿಚಾರಗಳಿವೆ' ಎಂದು ಉದ್ಗರಿಸಿದ್ದಾರೆ. ಅವರ 'ಶ್ರೀ ಅರವಿಂದರು' ಜೀವನ ಚರಿತ್ರೆಗೆ ಮುನ್ನುಡಿ ಬರೆಯುತ್ತ. 'ಗೆಳೆಯ ಲಿಂಗಣ್ಣನವರು ಬಹು ಭಕ್ತಿಯಿಂದ, ಏರಿಕೆಯ ಉತ್ಸಾಹದಿಂದ ಅನೇಕ ಮುಖವಿವೇಕದಿಂದ ಜೀವನ ಚರಿತ್ರೆಯನ್ನು ಎದೆದುಂಬುವಂತೆ ಬರೆದಿದ್ದಾರೆ.... ಇಲ್ಲಿ ಚರಿತ್ರೆ ಬೇಕಾದವರಿಗೆ ಚರಿತ್ರೆಯಿದೆ, ತತ್ವ ಬೇಕಾದವರಿಗೆ ಅದೂ ಇದೆ' ಎಂದು ತಿಳಿಸಿದ್ದಾರೆ. ಅವರ 'ಸಿಡಿಲುಸನ್ಯಾಸಿ' ವಿವೇಕಾನಂದ ಜೀವನ ಚರಿತ್ರೆಗೆ ಬರೆದ ಮುನ್ನುಡಿಯಲ್ಲಿ 'ಸ್ವತಃ ಲಿಂಗಣ್ಣನೂ ಸಿಡಿಲುಮರಿಯೇ' ಎಂದು ಹೇಳುತ್ತ 'ಸಿಂಪಿಲಿಂಗಣ್ಣ ಅವರ ಸಿಡಿಲು ಸನ್ಯಾಸಿ ಎಂಬ ಚರಿತ್ರ ಚಿಂತನಾತ್ಮಕ ಪ್ರಬಂಧವು ಗ್ರಂಥದ ಗಾತ್ರವನ್ನೂ, ತೂಕವನ್ನೂ ಒಳಗೊಂಡಿದೆ' ಎಂದು ತಿಳಿಸಿದ್ದಾರೆ.

ಸಿಂಪಿ ಲಿಂಗಣ್ಣನವರ ಹಿರಿಯ ಮಗಳು ಭುವನೇಶ್ವರಿ ಬಾಗಲಕೋಟೆಯವರ 'ಕರುಳಿನಕರೆ' ಕಥಾಸಂಕಲನಕ್ಕೆ ಮುನ್ನುಡಿ ಬರೆಯುತ್ತ ಬೇಂದ್ರೆಯವರು 'ಭುವನೇಶ್ವರಿಯ

ಹೃದಯ ವಿಸ್ತಾರವಂತೂ ನವಯುಗದ ಹೊಸ್ತಿಲಕ್ಕೆ ರಂಗೋಲಿಯನ್ನಿತ್ತು ಸ್ವಾಗತಿಸಿದಂತಿದೆ.... ಎರಡು ಕಥಾಸಂಕಲನಗಳನ್ನು ಬರೆದ ಭುವನೇಶ್ವರಿಯ ಮೂರನೆಯ ಕೃತಿ ಕಾದಂಬರಿಯೇಕೆ ಆಗಬಾರದು' ಎಂದು ಆಶಿಸಿ ಹರಿಸಿದ್ದಾರೆ.

ಆ ಹಾರೈಕೆಯಂತೆ ಭುವನೇಶ್ವರಿ 'ಅತ್ತಿಗೆ ಮೈದುನ' ಎಂಬ ಕಾದಂಬರಿಯನ್ನು ಬರೆದಳು. ಆ ಕೃತಿಗೆ ಮುನ್ನುಡಿ ಬರೆದಾಗ ಬೇಂದ್ರೆಯವರು ತಮ್ಮ ಮಗಳು ಮುಂಗಲಾಳ ಬಗೆಗೂ ಬರೆದು, ಸಿಂಪಿ ಬೇಂದ್ರೆ ಕುಟುಂಬದ ಮಧುರ ಸಂಬಂಧ ಎತ್ತಿ ತೋರಿಸಿದ್ದಾರೆ.

ತಮ್ಮ 'ಸ್ವರ್ಗದೋಲೆಗಳು' ಕೃತಿಯನ್ನು ಸಿಂಪಿಯವರು ಬೇಂದ್ರೆಯವರಿಗೆ ಅರ್ಪಿಸಿದರು. ಅದನ್ನು ಓದಿ ಸಂತೋಷಪಟ್ಟ ಬೇಂದ್ರೆ ಹೇಳಿದರು : 'ಲಿಂಗಣ್ಣ ಕನ್ನಡಿಗರು ನಿನ್ನಿಂದ ಕನ್ನಡ ಸಂಸ್ಕೃತಿಯ ಹಾಲನ್ನು ಅಪೇಕ್ಷಿಸಿದ್ದರು. ನೀನು ಅವರಿಗೆ ಬೆಣ್ಣೆಯನ್ನೇ ಕೊಟ್ಟಿದ್ದೀ.'

ಬೇಂದ್ರೆಯವರು ಧಾರವಾಡ ಆಕಾಶವಾಣಿ ಕೇಂದ್ರದ ಕಾರ್ಯಕ್ರಮ ಸಲಹೆಗಾರರಾಗಿದ್ದಾಗ – ಸಿಂಪಿ ಲಿಂಗಣ್ಣನವರಿಂದ ಜನಪದ ಸಾಹಿತ್ಯ ವಿವಿಧಾಂಗಗಳ ಕುರಿತು ಸುಮಾರು 15 ಭಾಷಣಗಳನ್ನು ಮಾಡಿಸಿದ್ದರು.

ಸಿಂಪಿಲಿಂಗಣ್ಣನವರು ಧಾರವಾಡಕ್ಕೆ ಹೋದಾಗಲೆಲ್ಲ ಬೇಂದ್ರೆಯವರ ಮನೆಗೆ ತಪ್ಪದೆ ಹೋಗುತ್ತಿದ್ದರು. ಆಗ ಬೇಂದ್ರೆಯವರು ಹೊಸದಾಗಿ ಪ್ರಕಟವಾದ, ತಮ್ಮ ಹೊಸಕವನ ಸಂಕಲನವನ್ನು 'ಸಿಂಪಿ ಲಿಂಗಣ್ಣನಿಗೆ ಸ್ನೇಹದಿಂದ' ಎಂದು ಆತ್ಮೀಯವಾಗಿ ಬರೆದುಕೊಡುತ್ತಿದ್ದರು. ಲಿಂಗಣ್ಣನವರು ಮುಂದೆ ಬರೆದು ಕಳಿಸುತ್ತಿದ್ದ ರಸವಿಮರ್ಶೆಯನ್ನು ಬೇಂದ್ರೆಯವರು ತಮ್ಮ ಮುಂದಿನ ಪುಸ್ತಕದಲ್ಲಿ ದಾಖಲಿಸುತ್ತಿದ್ದರು.

1945ರಲ್ಲಿ ಲಿಂಗಣ್ಣನವರು ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ಅಂಗವಾಗಿ ನಡೆದ ಜನಪದ ಸಾಹಿತ್ಯಗೋಷ್ಠಿಗೆ ಅಧ್ಯಕ್ಷರೆಂದು ನಿಯುಕ್ತರಾದರು. ಆಗ ಬೇಂದ್ರೆಯವರು ಸ್ವತಃ ಸೊಲ್ಲಾಪುರದಿಂದ ಹಲಸಂಗಿಗೆ ಹೋಗಿ ಸಿಂಪಿಯವರನ್ನು ಜೊತೆ ಮಾಡಿಕೊಂಡು ರಬಕವಿಗೆ ಹೋದರು.

1946ರಲ್ಲಿ ಬೇಂದ್ರೆಯವರ ಐವತ್ತನೇ ಹುಟ್ಟು ಹಬ್ಬದ ನಿಮಿತ್ತಸಿಂಪಿಯವರು ಬೇಂದ್ರೆಯವರ ಕುರಿತು 'ದತ್ತಸಾಹಿತ್ಯ' ವಿಮರ್ಶಾಗ್ರಂಥ ಬರೆದರು. ಅದು ಬೇಂದ್ರೆಯವರ ಗದ್ಯ, ಪದ್ಯವನ್ನು ಸಮಗ್ರವಾಗಿ ವಿಮರ್ಶಿಸಿ ಬರೆದ ಮೊದಲ ಕೃತಿಯಾಗಿದೆ.

### ಶಂಕರಗೌಡ

ಬೇಂದ್ರೆಯವರು ಒಂಟಮುರಿ ದೇಸಾಯರಾದ ಶಂಕರಗೌಡರಿಗೆ ಯೋಗಿ ಅರವಿಂದರ ಚಿಂತನೆಯನ್ನು ತಿಳಿಸಿದರು. ಶಂಕರಗೌಡರು ತಮ್ಮ ಜೊತೆ ಬೇಂದ್ರೆಯವರನ್ನು ಶ್ರೀ ಅರವಿಂದಾಶ್ರಮ ಪಾಂಡಿಚೆರಿಗೆ ಕರೆದುಕೊಂಡು ಹೋದರು.

ಶ್ರೀ ಅರವಿಂದರ ಅನುಯಾಯಿಯಾದ ಶಂಕರಗೌಡರು ಪಾಂಡಿಚೆರಿಯಲ್ಲಿ ದೇಹವಿಟ್ಟರು. ಬೇಂದ್ರೆಯವರು ಶರಣಗೆಳೆಯ ಶಂಕರಗೌಡರ ಉದಾರತೆ, ಕನ್ನಡ ನಾಡಿನ ಅಭಿಮಾನ, ಶರಣ ತತ್ವವನ್ನು ನೆನೆದು 'ಗೆಳೆಯ ಶಂಕರಗೌಡರಿಗೆ' ಕವನ ರಚಿಸಿ ಶ್ರದ್ಧಾಂಜಲಿ ಅರ್ಪಿಸಿದರು. 'ನಿಮ್ಮ ಬದುಕು ಕಾಶ್ಮಿರಿ ಶಾಲು, ಅದು ಅಲ್ಲ ತೇಪೆ ಕವುದೆ' ಎಂದು ಅವರ ವ್ಯಕ್ತಿತ್ವದ ಹಿರಿಮೆಯನ್ನು ಬಣ್ಣಿಸಿದರು.

ಶಿವಾಯನಮ ಓಂ ಶಿವಾಯನಮಃ ದಿಮಡಿ ಮಿಡಿಯುತಿತ್ತು.
ಏಕನಾದವೂ ಶಿವಾಯನಮ ಓಂ ಶ್ರುತಿಯ ಹಿಡಿಯುತ್ತಿತ್ತು.
ಶಿವಾಯನಮ ಓಂ ಬಯಲಿನಲ್ಲಿ ಪಡಿನುಡಿಯು ಸಿಡಿಯುತ್ತಿತ್ತು.

***

ನನ್ನ ಜೀವನದಿ ನೀವು ತೇಲಿದಿರಿ ಚುಕ್ಕೆ ತೇಲುವಂತೆ.
ಗೆಲುವಿನಲ್ಲೆ ಒಳಸೋತಿರಣ್ಣ ಸವಿಗೆಳೆಯ ಸೋಲುವಂತೆ.
ಆಪತ್ತಿನಲ್ಲಿ ಸಂಪತ್ತಿನಲ್ಲಿ ನೆರವಾಗಿ ಸಾಲುವಂತೆ.

***

ಒಂಟಿ ಮುರಿಗೆಯಲಿ ಹಳ್ಳ ಹಿಡಿದು ಹೋಗುತ್ತಲಿತ್ತು ನೀರು.
ಕಂಠದಲ್ಲಿ ನೆಲೆಗೊಂಡು ಇತ್ತು ಕನ್ನಡದ ತಾಯಿ ಬೇರು.
ಬಯಲು ಸೀಮೆಯಲಿ ಉರುಳುತಿತ್ತು ಪ್ರಭುದೇವರೊಂದು ತೇರು

***

ಬಾಳಿನಲ್ಲಿ ಕೈಹಿಡಿದು ನಡೆಸಿದಿರಿ ಜೊತೆಯ ಅಣ್ಣಗಳನು.
ತಮ್ಮಗಳಿಗೆ ಕಂಡದ್ದ ತೋರಿ ತೆರೆಸಿದಿರಿ ಕಣ್ಣುಗಳನು.
ಹೆಣ್ಣಗರುಳಿನಲಿ ತೂಗಿ ನೋಡಿದಿರಿ ಹೊನ್ನು ಮಣ್ಣುಗಳನು.

(ಗೆಳೆಯ ಶಂಕರಗೌಡರಿಗೆ : ಹೃದಯ ಸಮುದ್ರ)

## ನಂಜುಂಡೇವ ಅರಿವಿಗೆಕದ್ದು

ಬೇಂದ್ರೆಯವರು ಶರಣರ ಬದುಕು, ವಚನದ ಅರಿವು, ಸಮತಾಭಾವದ ಚಿಂತನೆಗಳಲ್ಲಿ ಒಂದಾಗಿ ಹೋಗಿದ್ದರು. ಬಸವಣ್ಣನರು ತಮ್ಮ ಮಗ ಬಾಲಸಂಗಯ್ಯನ ಮರಣಕಾಲಕ್ಕೆ 'ಪುಷ್ಪವಿದ್ದಂತೆ ಮೊಗ್ಗೆಯನ್ನರ್ಪಿಸಿಕೊಂಡ ಶಿವನು!' ಎಂದು ವಿಲಾಪಿಸಿದ್ದಾರೆ. ಆ ಸಾಲುಗಳನ್ನು ಉದ್ಧರಿಸಿ ಬೇಂದ್ರೆಯವರು ತಮ್ಮ ಚೊಚ್ಚಿಲಮಗ ಕ್ಷೇಮೇಂದ್ರನ ಮರಣವನ್ನು ಕುರಿತು ಹೀಗೆ ಶೋಕಿಸಿದ್ದಾರೆ:

ಕೊಳಲಾಗಬಹುದಿತ್ತು, ಕಳಲಿದ್ದಾಗಲೇ ಕಡಿದ ಕಾಳ!
ದೇವ! ಮಗುವೆಂದು ತಿಳಿದಿದ್ದೆ ಅದಾಯಿತು ನೀರ್ಗುಳ್ಳಿ !

(ಅರ್ಪಣ ತರ್ಪಣ : ಉಯ್ಯಾಲೆ)

'ಅರಿವೆ ಗುರು' ಎಂಬುದು ಶರಣರ ಚಿಂತನೆಯಲ್ಲಿ ಪ್ರಮುಖವಾಗಿ ಸಮಾಜವನ್ನು ಜಾಗೃತಗೊಳಿಸಿದೆ. ಆತ್ಮ ಪರಮಾತ್ಮನ ಅರಿವು ಶರಣ ಚಿಂತನೆಯ ಆಂತರ್ಯವಾಗಿದೆ. ಅಂತಹ ಅರಿವಿನಿಂದ ವಂಚಿತರಾದಾಗ ನಾವು ವಿಷ ಉಂಡಂತೆ ಎಂದು ಬೇಂದ್ರೆಯವರು ಶರಣಭಾವದಲ್ಲಿ ಹೀಗೆ ಹೇಳಿದ್ದಾರೆ :

ನಂಜುಂಡೇವ ಅರುವಿಗೆ ಕದ್ದು
ಕೈಲಾಸಂಬೋದು ಮುಗಿಲಮದ್ದು ॥
ಜನ್ಮ ಜನ್ಮಕೂ ಒಂದs ಹಣ್ಣು
ಶಿವ ಶಿಂಗಾರದ ತ್ವಾಟಕs ॥

ಜೀವನ ಒಂದು ನಾsಟಕ
ಹೂವು ಹಣ್ಣಿನಾ ಕೂಟಕ ॥

(ಜೀವನಕಲ್ಯಾಣ : ಸೂರ್ಯಪಾನ)

ಭೂತದಯೆ ಹೊಂದಿದವನು ಮಾತ್ರ ಶರಣ. ಜೀವದಯಾಪರ ನಡೆಯೆ ಶರಣತತ್ವ. ಸಮತಾಭಾವವೇ ಶರಣಾನುಭವ ಎಂದು ಬಾಳಿದವರು ಶರಣರು. ಹಾಗೆ ಬಾಳಿ ಅಧ್ಯಾತ್ಮ ಜೀವಿಯಾಗಿದ್ದ ಮಧುರಚೆನ್ನರನ್ನು ನೆನೆಯುವ ಕವನದಲ್ಲಿ ಬೇಂದ್ರೆಯವರು ಶರಣತತ್ವವನ್ನು ಹೀಗೆ ತಿಳಿಸಿದ್ದಾರೆ:

ತಾಪ ಕಂಡಲೆಲ್ಲ ನಮ್ಮ ಸಂಪ್ರೀತಿಯನು
ನೀರಾಗಿ ಪರಿಸಬೇಕು.
ಪಾಪ ! ಪತಿತರ ಕಂಡು ಕೈ ನೀಡಿ ನೆಲೆಗೊಟ್ಟು
ನೆಲವಾಗಿ ಧರಿಸಬೇಕು.

(ಹರಕೆ : ಸೂರ್ಯಪಾನ)

ಶರಣ ಚಿಂತನೆಯನ್ನು ಜೀವನದಲ್ಲಿ ಅಳವಡಿಸಿಕೊಂಡಿದ್ದ ಬೇಂದ್ರೆಯವರು ಸರಳ ಜೀವನ ನಡೆಸುತ್ತ, ಜನಸಾಮಾನ್ಯರಲ್ಲಿ ಒಂದಾಗಿ ಬಾಳಿ, ಜಾತಿ ಮತ ಪಂಥಗಳಿಂದ ಮುಕ್ತರಾದವರಾಗಿದ್ದರು. ಅವರು ಆಶಿಸಿದ್ದು ಇದು:

ಗುಡಿಸಲವನ್ನೆ ಗುಡಿಯನುವಂತೆ
ಬದುಕುವರೆಲ್ಲ ದೀನ ಜನಾ.
ಚಿಂತೆಯ ಬಿಟ್ಟು ಎದೆಗೆದೆ ಕೊಟ್ಟು
ಕಳೆಯುವೆನಲ್ಲಿಯೆ ನನ್ನದಿನಾ

(ನಾಳಿನ ಕನಸು : ಪರಾಕಿ)

——— *** ———

## ಸಂಖ್ಯಾ ಟಿಪ್ಪಣಿಗಳು

1) ದ.ರಾ.ಬೇಂದ್ರೆ, ಸಾಹಿತ್ಯದ ವಿರಾಟ್ ಸ್ವರೂಪ, ಸಮಾಜ ಪುಸ್ತಕಾಲಯ, ಧಾರವಾಡ, 1974, ಪು. 67.
2) ಅದೇ, ಪು. 214
3) ಅದೇ, ಪು. 836
4) ಎಸ್. ವಿದ್ಯಾಶಂಕರ(ಸಂ), ವಚನ ಪರಿಭಾಷಾಕೋಶ, ಕನ್ನಡ ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, 1993, ಪು. 138.
5) ಅದೇ, ಪು. 29,30
6) ವಿವಿರಗಳಿಗೆ ನೋಡಿ. ಸಾ.ವಿ.ಸ್ವ, ಪೂರ್ವೋಕ್ತ ಪು 1002ರಿಂದ 1009
7) ಎಸ್. ವಿದ್ಯಾಶಂಕರ (ಸಂ). ಪೂರ್ವೋಕ್ತ ಪು. 16
8) ಅದೇ, ಪು. 14
9) ದ.ರಾ.ಬೇಂದ್ರೆ, ಸಖೀಗೀತ, ಶ್ರೀಮಾತಾ ಪ್ರಕಾಶನ, ಧಾರವಾಡ, 1990, ಪು. 98, 99
10) ದ.ರಾ.ಬೇಂದ್ರೆ, ಸಾ.ವಿ.ಸ್ವ, ಪೂರ್ವೋಕ್ತ, ಪು 457ರಿಂದ 462 ನೋಡಿ
11) ಅದೇ, ಪು. 196
12) ದ.ರಾ.ಬೇಂದ್ರೆ, ಕನ್ನಡ ಸಾಹಿತ್ಯದಲ್ಲಿ ನಾಲ್ಕು ನಾಯಕರತ್ನಗಳು, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, 1968, ಪು 27,28
13) ದ.ರಾ.ಬೇಂದ್ರೆ, ಸಾ.ವಿ.ಸ್ವ, ಪೂರ್ವೋಕ್ತ, 198
14) ದ.ರಾ.ಬೇಂದ್ರೆ, ಕ.ಸಾ.ನಾ.ನಾ. ರತ್ನಗಳು, ಪೂರ್ವೋಕ್ತ, ಪುಟ 32
15) ಅದೇ, ಪು – 30
16) ಅದೇ, ಪು – 36
17) ದ.ರಾ.ಬೇಂದ್ರೆ, ಸಾ.ವಿ.ಸ್ವ, ಪೂರ್ವೋಕ್ತ, ಪು 442, 443
18) ವಾಮನ ಬೇಂದ್ರೆ, ಬೇಂದ್ರೆ ಜೀವನ ಪರಿಚಯ, ಶ್ರೀ ಮಾತಾಪ್ರಕಾಶನ, ಧಾರವಾಡ 1990, ಪು – 43
19) ದ.ರಾ.ಬೇಂದ್ರೆ, ಸಾ.ವಿ.ಸ್ವ, ಪೂರ್ವೋಕ್ತ, ಪು 642, 43
20) ಸಿಂಪಿ ಲಿಂಗಣ್ಣ, ಶ್ರೀಮಧುರ ಚೆನ್ನರ ಸ್ಮೃತಿಗಳು, ಲೋಹಿಯಾ ಪ್ರಕಾಶನ, ಬಳ್ಳಾರಿ, 2000, ಪು 110
21) ದ.ರಾ.ಬೇಂದ್ರೆ, ಸಾ.ವಿ.ಸ್ವ, ಪೂರ್ವೋಕ್ತ, ಪು. 649
22) ಅದೇ, ಪು 649, 650

## ಲೇಖಕರ ಕೃತಿಗಳು

1. ಹಾಡುಹಕ್ಕಿ ಅಂಬಿಕಾತನಯದತ್ತ (1995)
   ಮೂರನೆ ಆವೃತ್ತಿ, 2012
2. ಡಿ.ಆರ್.ಬೇಂದ್ರೆ (1997) ಮೈಸೂರು ವಿಶ್ವವಿದ್ಯಾನಿಲಯವು ಪ್ರಕಟಿಸಿರುವ ಆಂಗ್ಲಕೃತಿ.
3. ನಾಕುತಂತಿ – ಒಂದು ಟಿಪ್ಪಣಿ (2000)
   ಮೂರನೆ ಆವೃತ್ತಿ –2012
4. ರಸ್ತೆ ನಿಯಮಗಳು (2000)
   ಮೈಸೂರು ವಿಶ್ವವಿದ್ಯಾನಿಲಯವು ಪ್ರಕಟಿಸಿರುವ ಕೃತಿ
   ಐದನೆ ಆವೃತ್ತಿ – 2015
5. ಹೂತಽದ ಹುಣಸಿ (2000) (ದ.ರಾ.ಬೇಂದ್ರೆ ಕಾವ್ಯ ವಿಮರ್ಶೆ)
   ಎರಡನೆ ಆವೃತ್ತಿ 2011
6. ಬೇಂದ್ರೆಯವರ ಸಾಹಿತ್ಯದಲ್ಲಿ ಸ್ತ್ರೀ – ಒಂದು ಅಧ್ಯಯನ (2001) (ಪಿ.ಎಚ್.ಡಿ. ಮಹಾಪ್ರಬಂಧ)
   ಎರಡನೆ ಆವೃತ್ತಿ 2012
7. ಬರೆಹದಲ್ಲಿ ಬೇಂದ್ರೆಯವರ ಬದುಕು (2008) ದ.ರಾ. ಬೇಂದ್ರೆ ರಾಷ್ಟ್ರೀಯ ಟ್ರಸ್ಟ್, ಧಾರವಾಡ ಪ್ರಕಟಿಸಿರುವ ಕೃತಿ.
8. ಅಂತರಂಗದತ್ತ ನಯನ (2010)
9. ಮಹಾಕವಿ ಲಕ್ಷ್ಮೀಶನ ವಚನ ಜೈಮಿನಿ ಭಾರತ (2012)
10. ಹರಿಹರ ಮಹಾಕವಿಯ ವಚನ ಗಿರಿಜಾಕಲ್ಯಾಣ (2013)
11. ಬೇಂದ್ರೆಯವರ ಸಾಹಿತ್ಯದಲ್ಲಿ ಶರಣ ಚಿಂತನೆ (2015)
12. ರಾಘವಾಂಕ ಮಹಾಕವಿಯ ವಚನ ಹರಿಶ್ಚಂದ್ರ ಚಾರಿತ್ರ (2015)
13. ತಿರುತಿರುಗಿಯು ಹೊಸತಾಗಿರಿ (2015)
    (ದ.ರಾ.ಬೇಂದ್ರೆಯವರ ನಾದಲೀಲೆಯ ಅಧ್ಯಯನ)

* * *

ಬೇಂದ್ರೆಯವರ ಸಾಹಿತ್ಯದಲ್ಲಿ ಶರಣ ಚಿಂತನೆ



ಡಾ. ಕೃಷ್ಣಪ್ಪನವರು ಬೇಂದ್ರೆ ಮಾಸ್ತರರಿಗೆ ಜ್ಞಾನಪೀಠ ಪ್ರಶಸ್ತಿಗೆ ಕಾರಣವಾದ ನಾಕುತಂತಿ ಗ್ರಂಥವನ್ನು ಕುರಿತು ಪುಸ್ತಿಕೆಯೊಂದನ್ನು ರಚಿಸಿದ್ದಾರೆ. ಅದನ್ನು ಓದಿದಮೇಲೆ ನಾಕುತಂತಿಯ ಅಂತರಾರ್ಥ ದೂರದಿಂದ ಕಾಣುವ ದೀಪದಂತೆ ದರ್ಶನವಾಯಿತು. ಹೀಗೆ ಬೇಂದ್ರೆ ಮಾಸ್ತರರ ಸರ್ವಸಾಧಾರಣ ಎಂದು ಕಾಣುವ ಕವಿತೆಗಳಲ್ಲಿ ಶರಣ ಸಾಹಿತ್ಯ ಸಾರ ಹೇಗೆ ಮೂಡಿದೆ ಎಂದು ಡಾ. ಕೃಷ್ಣಪ್ಪನವರು ಈ ಪುಸ್ತಿಕೆಯಲ್ಲಿ ಕಾಣಿಸಿದ್ದಾರೆ. ಇದು ಸಾಹಸದ ಕೆಲಸ. ಅವರ ಈ ಸಾಹಸವನ್ನು ನಾನು ಮೆಚ್ಚಿ "ಕೃಷ್ಣಪ್ಪನವರೇ ಈ ಪುಸ್ತಕದ ವಿಷಯವನ್ನು ಇನ್ನೂ ವಿಸ್ತಾರವಾಗಿ ಬರೆದಿದ್ದರೆ, ಓದುಗರಿಗೆ ಅನುಕೂಲವಾಗುತ್ತಿತ್ತು. ಶರಣ ಚಿಂತನೆ ಇನ್ನೂ ಸುಲಭವಾಗಿ ಅರ್ಥವಾಗುತ್ತಿತ್ತು" ಎಂದೆ. ಆಗ ಅವರು "ಬರೆಯಬಹುದಾಗಿತ್ತು, ಆದರೆ ಜಾಳ ಜಾಳವಾಗುತ್ತಿತ್ತು. ಅದಕ್ಕಾಗಿಯೇ ಸಂಕ್ಷಿಪ್ತವಾಗಿ ಬರೆದೆ" ಎಂದರು. ಈ ಮಾತು ನಿಜವೆ. ಡಾ. ಕೃಷ್ಣಪ್ಪನವರ ಈ ಗ್ರಂಥವನ್ನು ಓದಲಿಚ್ಛಿಸುವ ಸಹೃದಯ ಒಮ್ಮೊಮ್ಮೆ ಗ್ರಂಥಕರ್ತೃವಿಗಿಂತಲೂ ವಿಸ್ತಾರವಾದ ಜ್ಞಾನದ ಪರಿಚಯವುಳ್ಳವನಾಗಿರಬೇಕಾಗುತ್ತದೆ. ಅಂಥ ಜಿಜ್ಞಾಸುಗಳು ಈ ಪುಟ್ಟ ಪುಸ್ತಿಕೆಯಿಂದ ಪ್ರಯೋಜನ ಪಡೆದಾರು. ಅಂತೂ ಈ ಪುಸ್ತಿಕೆಯನ್ನು ಶರಣ ಸಂಸ್ಕೃತಿ, ಶರಣ ಚಿಂತನೆಯಲ್ಲಿ ಆಸಕ್ತಿಯುಳ್ಳವರು ಅಭ್ಯಸಿಸಲು ಯೋಗ್ಯವಾದ ಆಕರ ಗ್ರಂಥವೆಂದು ನಾನು ಭಾವಿಸುತ್ತೇನೆ. ಶರಣ ಸಂಸ್ಕೃತಿ, ಶರಣ ಚಿಂತನೆ, ಶರಣ ತತ್ತ್ವಕ್ಕೆ ಇದೊಂದು ಅಮೂಲ್ಯ ಕೊಡುಗೆ.

**ಡಾ. ಕೋ. ಚೆನ್ನಬಸಪ್ಪ**



**ವಂಶಿ ಪಬ್ಲಿಕೇಷನ್ಸ್**
ನಂ.72/2, 9ನೇ ಕ್ರಾಸ್,ವಾಜ್ಜರಹಳ್ಳಿ ಮುಖ್ಯರಸ್ತೆ,
ಸುಭಾಷ್‌ನಗರ, ಜ್ಯೋತಿನಗರದ ಹತ್ತಿರ,
ನೆಲಮಂಗಲ, ಬೆಂಗಳೂರು – 562 123
ಮೊಬೈಲ್: 97430 55511
ಇ-ಮೇಲ್: vamshipublications@gmail.com

dailyhunt

₹30